ಚೇರಮಾಂಕ ವಿರಚಿತ

# ಚೇರಮ ಕಾವ್ಯಂ

ಸಂಪಾದಕ

ಎನ್. ಬಸವಾರಾಧ್ಯ, ಎಂ.ಎ.

ಕನ್ನಡ ಸಾಹಿತ್ಯ ಪರಿಷತ್ತು

ಚಾಮರಾಜಪೇಟೆ :: ಬೆಂಗಳೂರು-೨

೧೯೫೬

# ಅರಿಕೆ

ಚೇರಮ ಕಾವ್ಯವನ್ನು ಬರೆದ ಕವಿ ಚೇರಮಾಂಕ. ಈತನ ತಂದೆ ತ್ರ್ಯಕ್ಷ ಪೂಜಾ ನಿಷ್ಠನೂ, ರಾಜಪೂಜ್ಯನೂ ಆದ ಗಂಗಪ್ಪಸೆಟ್ಟಿ ಚೆನ್ನವೀರೇಶ ಈತನ ಗುರು. ಗುಬ್ಬಿಯ ಮಲ್ಲಣಾರ್ಯರ ಕೃಪೆಯಿಂದ ತನ್ನ ಗ್ರಂಥವನ್ನು ಬರೆದಂತೆ ಹೇಳಿಕೊಂಡಿದ್ದಾನೆ. ಇವನು ವೀರಶೈವ ಕವಿ. ಈ ಗ್ರಂಥನಿರ್ಮಾಣ ಕಾಲವು ಶಕ ೧೪೪೮ನೆಯ ವ್ಯಯ ಸಂವತ್ಸರ (ಕ್ರಿ.ಶ. 1526) ಎಂದು ೧೧ನೆಯ ಸಂಧಿ ೬೯ನೆಯ ಪದ್ಯದಿಂದ ತಿಳಿದುಬರುತ್ತದೆ. ಈತನು "ನವರಸ ಭಾವ ಲಕ್ಷಣಾಲಂಕಾರನಿಪುಣ" ಎಂದು ತನ್ನನ್ನು ವಿಶೇಷಿಸಿಕೊಂಡಿದ್ದಾನೆ

ತನ್ನ ಕಾವ್ಯ "ಬಿಟ್ಟಕಣ್ಣವರೂರ ಸುಧೆಯ ಸವಿ, ಮನವಲರ್ದು ನಟ್ಟು ಕೂಡುವ ಲತಾಂಗಿಯ ಸೋಂಕು , . . . . . . . . ಗಂಗಪ್ಪಸೆಟ್ಟಿಯಾತ್ಮಜ ಚೇರಮಂ ಪೇಳ್ದ ರಸಕಾವ್ಯ ವೆಸೆವುದಖಿಳರಿಗೆ ಸೇವ್ಯ" (ಸಂಧಿ ೧–೧೯) ಎಂದೂ, "ಸತಿಸಪ್ತಮಿಗಳ ಸಮಸಂಸ್ಕೃತಂಗಳನು ತದಿಹಿತಮಂ ಕ್ರಿಯಾ ಗಮಕ ವರ ಸಮಾಸಂಗಳಂ . . . . . ತಪ್ಪಿರೆ ತಿದ್ದಿಯಾಂ ನಿಮ್ಮ ಸುತ ನಲಾ ಶಿವಕವೀಶ್ವರರು ವಿದ್ಯಾಕರರು ಶಂಕರಧ್ಯಾನಪರರು" (ಸಂಧಿ ೧–೨೦) ಎಂಬೂ ನಮ್ರತೆ ಯಿಂದ ಹೇಳಿಕೊಂಡಿದ್ದಾನೆ

ಈ ಕಾವ್ಯದ ಕಥಾವಸ್ತು ಪುರಾತನವಾದುದು. ಅರುವತ್ತುಮೂವರು ಶಿವಭಕ್ತರಲ್ಲಿ ಚೇರಮನೂ ಒಬ್ಬನು. ನಾರದನ ಬಿನ್ನಪದಂತೆ ಶಿವನು ಭಸಿತಕಾಯನನ್ನು ಧಾರುಣಿಗೆ ಕಳುಹಿಸಿ ವೀರಶೈವ ಧರ್ಮವನ್ನು ಪ್ರತಿಷ್ಠಾಪಿಸುವಂತೆ ತಿಳಿಸುವನು. ಅದರಂತೆ ಭಸಿತಕಾಯ ಚೇರಮನಾಗಿ ಭೂಲೋಕದಲ್ಲಿ ಅವತರಿಸಿ, ನಂಬಿಯಣ್ಣನೊಡಗೂಡಿ ಶೈವ ಧರ್ಮವನ್ನು ಸಾರಿ ಮತ್ತೆ ಶಿವನ ಸಾಯುಜ್ಯವನ್ನೇ ಸೇರುವನು.

ಹರಿಹರನ ತರುವಾಯ ಚೇರಮನ ವಿಚಾರವಾಗಿ ಕಾವ್ಯವನ್ನು ಬರೆದಿರುವವರಲ್ಲಿ ವಿರುಪರಾಜ (ತ್ರಿಭುವನ ತಿಲಕ) ಮತ್ತು ಚೇರಮ (ಚೇರಮ ಕಾವ್ಯ) ಮುಖ್ಯರಾದವರು. ವಿರುಪರಾಜ (ಶಕ ೧೪೪೧, =ಕ್ರಿ ಶ. 1519) ಚೇರಮರು ಸಮಕಾಲೀನರಾಗಿದ್ದಂತೆ ಕಂಡು ಬಂದರೂ ಒಬ್ಬರ ವಿಷಯವನ್ನು ಮತ್ತೊಬ್ಬರು ಪ್ರಸ್ತಾಪಿಸಿಲ್ಲ.

ಚೇರಮಾಂಕನ ಚೇರಮ ಕಾವ್ಯಕ್ಕೆ ಕನ್ನಡ ಸಾಹಿತ್ಯದಲ್ಲಿ ಒಂದು ಉತ್ತಮಸ್ಥಾನವಿದೆ. ಸಮಗ್ರ ಕಾವ್ಯವನ್ನು ವಾರ್ಧಕಷಟ್ಪದಿಯಲ್ಲಿಯೇ ರಚಿಸಿರುವ ಈತನಲ್ಲಿ ಕನ್ನಡತನ ಎದ್ದು ಕಾಣು ತ್ತದೆ. ಇದೊಂದು ವರ್ಣಕಕಾವ್ಯ. ಅತಿಯಾಗಿ ಸಂಸ್ಕೃತವನ್ನು ಬಳಸದೆ ಕನ್ನಡದಲ್ಲಿಯೇ ಸಮಗ್ರಕಾವ್ಯವನ್ನು ರಚಿಸಲು ಪ್ರಯತ್ನಿಸಿದ್ದಾನೆ. ಈತನ ಶೈಲಿ ಸುಪ್ರೌಢವಾಗಿದೆ; ಗಂಭೀರತೆ ಯಿಂದ ಕೂಡಿದೆ. ಕಾವ್ಯದಲ್ಲಿ ಬರುವ ವರ್ಣನೆಗಳನ್ನು ಔಚಿತ್ಯವರಿತು ಮಾಡಿದ್ದಾನೆ. ಚೇರ ಮಾಂಕನು ಚೇರಮ ಕಾವ್ಯವನ್ನು ಬಿಟ್ಟು ಮತ್ತಾವ ಗ್ರಂಥವನ್ನೂ ಬರೆದಂತೆ ಕಂಡುಬಂದಿಲ್ಲ.

ಚೇರಮ ಕಾವ್ಯವನ್ನು ಎರಡು ಓಲೆಯ ಪ್ರತಿಗಳಿಂದ ಪರಿಷ್ಕರಿಸಲಾಗಿದೆ. ಅವುಗಳಲ್ಲಿ ಒಂದು ಮೈಸೂರು ಪ್ರಾಚ್ಯವಿದ್ಯಾ ಸಂಶೋಧನ ಸಂಸ್ಥೆಗೆ ಸೇರಿದ್ದು. ಇದನ್ನು 'ಗ' ಎಂದು ಕರೆದಿದ್ದೇನೆ. ಈ ಪ್ರತಿಯ ಪಾಠಗಳು ಶಕ್ಕಮಟ್ಟಿಗಿವೆ. ಇದರಲ್ಲಿ 11 ಸಂಧಿ 555 ಪದ್ಯಗಳು

ಮಾತ್ರ ಇವೆ. ಮೂಲಮಾತೃಕೆಯಾದ 'ಕ' ಪ್ರತಿಯಲ್ಲೂ ಮದ್ರಾಸ್ ಗೌರ್ನಮೆಂಟ್ ಓರಿಯಂಟಲ್ ಮ್ಯಾನುಸ್ಕ್ರಿಪ್ಟ್ಸ ಲೈಬ್ರರಿಯಲ್ಲಿರುವ (ಡಿ. ನಂ. 932, 933) ಎರಡು ಪ್ರತಿಗಳಲ್ಲಿಯೂ 11 ಸಂಧಿ 575 ಪದ್ಯಗಳಿವೆ. 'ಗ' ಪ್ರತಿಯಲ್ಲಿ ಇಲ್ಲದ ಪದ್ಯಗಳನ್ನು ಅಡಿಟಿಪ್ಪಣಿಗಳಲ್ಲಿ ಸೂಚಿಸಿದ್ದೇನೆ. ಹೆಚ್ಚಿನ ಪದ್ಯಗಳನ್ನು ಪರಿಶಿಷ್ಟದಲ್ಲಿ ಕ್ರಮವಾಗಿ ಕೊಟ್ಟಿದ್ದೇನೆ. ಸೂಕ್ತವೆಂದು ತೋರಿದ ಕಡೆ ಪಾಠಾಂತರಗಳನ್ನು ಕೊಟ್ಟಿದ್ದೇನೆ.

ಚೇರಮ ಕಾವ್ಯವನ್ನು ಪರಿಷ್ಕರಿಸುವಂತೆ ತಿಳಿಸಿದವರು ಪೂಜ್ಯ ವಿದ್ಯಾ ಗುರುಗಳಾದ ಶ್ರೀ ಡಿ. ಎಲ್. ನರಸಿಂಹಾಚಾರ್, ಎಂ.ಎ. ಅವರು. ಕನ್ನಡ ಕೋಶಕ್ಕೆ ಶಬ್ದಗಳನ್ನು ಸಂಗ್ರಹಿಸುವಾಗ ಚೇರಮ ಕಾವ್ಯದ ಪ್ರತಿಯನ್ನು ಓದುವ ಸುಯೋಗ ಲಭಿಸಿತು. ಓದಿದ ಮೇಲೆ ಈ ಕಾವ್ಯದ ಮೇಲೆ ನನಗೆ ಆತ್ಮೀಯತೆ ಉಂಟಾಯಿತು. ಕೂಡಲೆ ಗುರುವರ್ಯರನ್ನು ಇದರ ಪ್ರಕಟನೆ ಬಗ್ಗೆ ವಿಚಾರಮಾಡಿದೆ. ಅವರು ಪ್ರತಿಯನ್ನು ಸಿದ್ಧಪಡಿಸುವಂತೆ ಹೇಳಿದರು. ಅಂತೆಯೇ ಮುದ್ರಣದ ಪ್ರತಿ ತಯಾರಾಯಿತು. ಮತ್ತೊಂದು ಪ್ರತಿಯಿಂದ ಪಾಠಗಳನ್ನು ಗುರುತಿಸಿದ್ದರೂ, ಕೆಲವೆಡೆ ಸಂದೇಹಗಳು ಉಳಿದುಕೊಂಡುವು. ಆಗ ಗುರುಗಳು ನೆರವಿಗೆ ಬಂದು ಸಮಗ್ರ ಕಾವ್ಯದ ಕರಡನ್ನು ಪರಿಶೀಲಿಸಿ ಉತ್ತಮ ಪಾಠವನ್ನು ಗುರುತು ಮಾಡಿದರು. ಅಲ್ಲಿಗೂ ಬಗೆಹರಿಯದ ಸಂದೇಹಗಳನ್ನು ಪ್ರೂಫಿನಲ್ಲಿ ಸರಿಪಡಿಸಿದರು. ಚೇರಮ ಕಾವ್ಯದ ಸಂಪಾದಕತ್ವ ಇಂದು ನನ್ನೊಬ್ಬನ ಹೆಸರಿನಲ್ಲಿ ಉಳಿದುಕೊಂಡಿದ್ದರೂ ಅದಕ್ಕೆ ಉಸಿರಿತ್ತವರು ಅವರು. ಅದರ ಪಾಠಗಳನ್ನು ಗುರುತಿಸುವಾಗ ಮೈಸೂರು ಪ್ರಾಚ್ಯವಿದ್ಯಾ ಸಂಶೋಧನ ಸಂಸ್ಥೆಯಲ್ಲಿರುವ ಜ್ಯೋತಿಷ, ಧರ್ಮಶಾಸ್ತ್ರ ವಿದ್ವಾನ್ ಶ್ರೀ ನ. ಕೃಷ್ಣಜೋಯಿಸರು ನನ್ನೊಡನೆ ಬಹಳವಾಗಿ ಶ್ರಮಿಸಿದ್ದಾರೆ. ಅವರಿಗೆ ನನ್ನ ವಂದನೆಗಳು.

ಚೇರಮ ಕಾವ್ಯದ ಸಮಗ್ರ ವಿಮರ್ಶೆಯನ್ನೂ, ಸಂಶೋಧನೆಯನ್ನೂ ವಿಸ್ತೃತವಾಗಿ ಮುಂದಿನ ಸಂಚಿಕೆಯಲ್ಲಿ ಕೊಡಬೇಕೆಂಬ ಅಭಿಲಾಷೆ ಇದೆ. ಈ ಕಾವ್ಯವನ್ನು ಬೆಳಕಿಗೆ ತಂದ ಕನ್ನಡ ಸಾಹಿತ್ಯ ಪರಿಷತ್ತಿನ ಅಧಿಕಾರವರ್ಗದವರಿಗೆ ನಾನು ಕೃತಜ್ಞನಾಗಿದ್ದೇನೆ.

ಎನ್. ಬಸವಾರಾಧ್ಯ.

ಚೇರಮಾಂಕ ವಿರಚಿತ

# ಚೇರಮ ಕಾವ್ಯಂ

## ಮೊದಲನೆಯ ಸಂಧಿ

**ಸೂಚನೆ :**

ಭೂವಳಯದನುವನಾ ನಾರದಂ ಬಿನ್ನವಿಸೆ
ಪಾವನ ಚರಿತ್ರನೆನಿಸುವ ಭಸಿತಕಾಯನಂ
ದೇವದೇವಂ ಕಳುಪೆ ಧರಣೀತಳಕ್ಕೆ ಚೇರಮನಾಗಿ ನಡೆತಂದನು ||

ಶ್ರೀಮದಗಜಾವದನ ತಾಮರಸ ದಿನನಾಥ
ಕಾಮಿತ ಫಲಪ್ರದ ಸದಾ ಮಂಜುಲಾಂಗ ನಿ
ಸ್ಸೀಮ ನಿರ್ಮಳಮೂರ್ತಿ ಸಾಮವೇದಸ್ತುತ್ಯ ರಾಮಣೀಯಕ ಸುಭಕ್ತ |
ಪ್ರೇಮಿಯಾನತಕಲ್ಪಭೂಮಿರುಹ ಸಕಲಸುಖ
ಧಾಮ ಪರ್ವತಸಾರ್ವಭೌಮ ಸೌಂದರ ದಿವ್ಯ
ಜಾಮಾತೃವೆನಿಪ ಗಂಗಾಮಕುಟ ರಕ್ಷಿಸಾ ಪ್ರೇಮದಿಂ ಭೋಗಮಲ್ಲ || ೧ ||

ಸನ್ಮಾನಜನರಕ್ಷ ಸಕಲಮುನಿನಮಿತ ಹಿಮ
ವನ್ಮಹೀಧರಸುತಾಹರುಷಾಂಬುನಿಧಿಚಂದ್ರ
ಮನ್ಮಾನಸಾಂಭೋಜ ಮತ್ತಮಧುಕರ ಸದಾನಂದ ವಾಗೀಶವರದ |
ತನ್ಮಾತೃಕಾಭೂತಮುಖ್ಯತತ್ವಾಧಿಪ ಮ
ರುನ್ಮಕುಟ ಮಣಿಕಿರಣನಖರಪದ ನಿಖಿಲಸಂ
ಪನ್ಮಯ ಮಹಾದೇವ ಯಕ್ಷಸಖ ಶರ್ವ ಜಯ ಚಿನ್ಮಯನೆ ಭೋಗಮಲ್ಲ || ೨ ||

ಕಱಿ[1][ಮೆ][1]ಯ್ಯನೆಚ್ಚೆಯುಡಿ ಬಗ್ಗದೊವಲುಡೆಯ ಕದಿರ್
ಗಱಿವ ತಲೆವಣಿವಾವು ಬಜ್ಜರಗೊಡಲಿ ನೇಣು
ನೆಱಿಕೊಂಕಿ[2][ದ][2]ಲಗು ತಿಸುಳಂ ನಂಬುಗೆಯ ಕಿಚ್ಚು ಗಂಟೆಗಳ ಪತ್ತುಗಯ್ಯ |
ಸಱಿಮಿಂಡಿಯುರೆಮೆಯ್ಯ ತಲೆದೊಡದ ಸಲೆ (?) ಪಲ್ಲ
ಮಱಿಸಮ್ಮ ಕಾಳ್ಕೊರಳ ಕಿವಿಯಲೊಲೆವೆಲರುಣಿಯ
ಮಿಱುಪಗ್ಗಿಗಣ್ದಲೆಯ ಜೆಡೆಯ ತೊಱಿಪೆಱಿಯನುಳ್ಳಿಱಿಯ ಪೊರೆ ಭೋಗಮಲ್ಲ || ೩ ||

---

1-1 ವ (ಕ.ಗ). 2 ಯ (ಕ.ಗ).

ಪೇಳಲೇಂ ಮೇಲುದಿನ ಸಂಚಲತ್ವದಿನೊಗೆದ
ಗಾಳಿಪೂಜೆಯ ಹಬ್ಬುಗೆಯೊಳಿಪ್ಪ ಭೇಷಜದ
ಜಾಳದಿಂ ಪಣೆಯುಗ್ಗಿಕೊರಲ ಬಿಸ ಪಾವಂತಪಸ್ಮಾರದತಿಬಾಧೆಯ ।
ಓಳಿಯಂ ತೊಲಗಿಸುತ ಹರನ ಶಿವನೆನಿಸುತೀ
ರೇಳುಬರಿಸದ ಹರೆಯದೊಳು ರೋಮಜಾದಿ ವೃ
ದ್ಧಾಳಿಗಳ ಪೆತ್ತುಚ್ಚರಿಯ ಜಗನ್ಮಾತೆ ವಿಖ್ಯಾತೆ ಗಿರಿಜಾತೆ ಶರಣು ॥ ೪ ॥

ಪೊಡೆಯೊಳಿಡಿದಿರ್ದ ವಿದ್ಯಾಧನವನೆರೆದವ
ರ್ಗೊಡನೊಡನೆ ಕರೆದೀವ ಕೋಡುಳ್ಳ ಕಯ್ಯ ಕಂ
ಪಿಡಿದಿರ್ದ ದಾನವಂ ಬಯಸಿ ಬಂದಳಿಬುಧರ್ಗೆ ನಲಿದೀವ ಮೊಗದ ಕಯ್ಯ ।
ಒಡಲನೊಡ್ಡಿತ್ತೆಂದು ಗತಿಗೆಟ್ಟು ಸಾರ್ದಹಿಗೆ
ನಿಡುಗರದ ಪೇರುಸುರನಿತ್ತ ವಿಘ್ನೇಶ್ವರಾ
ಮೃಡಕುಮಾರಕ ಕೇರಳಾಧಿಪಚರಿತ್ರಮಂ ನಡಸು ನೀನಳ್ಕಱಂದೆ ॥ ೫ ॥

ನಱುಸುಯಿಲ್ಗೆಱಪ ತುಂಬಿಗಳ ತಳೆ ಮುಗಿಲುಮೆಯ್
ಮಿಱುಪ ಕಣ್ಮಲರೆಳೆಯ ಮಿಂಚು ಕಂಕಣರವಂ
ಬಿಱುಸಿಡಿಲ್ತೊಟ್ಟರನ್ನಂ ಮಿಸುಗುವಿಂದ್ರಗೋಪಂ ಮುತ್ತು ನೀರ್ಗಲ್ಗಳ ।
ತೆಱನಪ್ಪ ಕಾರ್ಗಾಲವೆಂದೇಱಿ ಬರ್ಪ ನವಿ
ಲುಱಿ ಕುಣಿಯೆ ಬಂದಪ್ಪಿದಮ್ಮನ ತೊಡೆಯಮೇಲೆ
ಮೆಱಿವ ಸುಕುಮಾರ ಷಣ್ಮುಖಧೀರ ಮೋಹನಾಕಾರ ಜಯದಿವ್ಯಶೂರ ॥ ೬ ॥

ಇಂದುಮೌಳಿಯ ಧರ್ಮವೇ ವೃಷಭನಾಗಿ ಯತಿ
ವೃಂದದಗ್ಗಳಶಿಲಾದಂಗೊಗೆದು ಬಳಿಕ ನಾ
ರಂದಮುನಿ ಬಿನ್ನವಿಸೆ ಶಿವನಿರೂಪದೊಳು ಧರೆಯಂ ಸಲಹಿದಧಿಕವಿನುತ ।
ವಂದಿಯಂ ದುರ್ಜನರ ಮಂದಿಯಂ ದೆಸೆದೆಸೆಯ
ಗೊಂದಿಯಂ ಪೊಗಿಸಿ ಬಲುಬಂದಿಯಂ ಮಾಡಿ ಜಯ
ವೊಂದಿರ್ದ ಶರಣಾನುಕಂದಿಯಂ ಭವನಡರ್ವ ನಂದಿಯಂ ಬಲಗೊಂಬೆನು ॥ ೭ ॥

ಮಂಗಲೆಗೆ ಕೈಮುಗಿಯದವಯವದ ರಕ್ತಮಾಂ
ಸಂಗಳಂ ಬಿದಿರ್ದು ಶಿವಕರುಣದಿಂ ಮೂಱುಪಾ
ದಂಗಳಿಂ ರಾಜಿಸುವ ನಿಷ್ಠೆ ನೆಲಸಿದ ಶಿಲಾದಾನ್ವಯೋದ್ಧರಣಕರುಣಾ ।
ಪಾಂಗಿಯಂ ಸಕಲಗಣಸಂಗಿಯಂ ಶರಣಾಂತ
ರಂಗಿಯಂ ಪರಮವೇದಾಂಗಿಯಂ ವಿನುತಯೋ
ಗಾಂಗಿಯಂ ಸರ್ವಾಂಗಲಿಂಗಿಯಂ ನಲಿದಾದಿಭೃಂಗಿಯಂ ಬಲಗೊಂಬೆನು ॥ ೮ ॥

ಧೀರನಂ ಘನಲಿಂಗಭಾರನಂ ದಕ್ಷಸಂ
ಹಾರನಂ ನರಹರಿವಿದಾರನಂ ಚಿತ್ಕಮಲ
ಶೂರನಂ ಸದ್ಗುಣಾಪಾರನಂ ಘನತರಗಭೀರನಂ ಭದ್ರಕಾಳಿ ।
ದಾರನಂ ಮೋಹನಾಕಾರನಂ ಪರತರ
ಸ್ವೈರನಂ ಸಂಹೃತಕ್ರೂರನಂ ನಿರ್ಮಳಾ
ಚಾರನಂ ವೀರನಂ ವೀರೇಶನಂ ವೀರಭದ್ರನಂ ಕೀರ್ತಿಸುವೆನು ॥ ೯ ॥

ಕಂಗಳೀಳ್ಗಿಯ ಕಾಣ್ಬತನಮುಂ ತಮಂ ಕವಿದು
ನುಂಗಿಕೊಂಡಿರ್ಪಂತೆಯಾತ್ಮಪ್ರಭಾವಮುಂ
ಪೊಂಗಲೀಯದೆ ಮುಸುಂಕಿರ್ದ ವಿದ್ಯಾಂಧತೆಯನೆಬ್ಬಟ್ಟಿ ತನ್ನ ಕರುಣಾ ।
ಪಾಂಗರುಚಿಯಂ ಕರ್ಣದೊಳಗೆ ಶಿವಮಂತ್ರಮುಂ
ಸಂಗೊಳಿಸುತೆನ್ನ ಮಸ್ತಕದ ಕಲೆಯಂ ಕರದ
ಲಿಂಗದೊಳ್ಕಾಣಿಸಿ ಚಿದಂಗನೆನಿಸಿದ ಚೆನ್ನವೀರೇಶನಡಿಗೆಱಗುವೆಂ ॥ ೧೦ ॥

ಶ್ರೀಗುರುನಿರೂಪದಿಂ ನಿಶಿತಶೂಲವನಪರಿ
ಚಾಗೆನಿಸಿಕೊಂಡ ಗುರುಭಕ್ತನನ್ವಯಭವ ಮ
ಹಾಗರಿಮೆಯಾಂತ ಗುಬ್ಬಿಯ ಮಲ್ಲಣಾರ್ಯಪೌತ್ರ ಸಂಸ್ತೋತ್ರಪಾತ್ರ ।
ಈಗ ಸಂಸ್ಕೃತಕವಿತೆ ಕರ್ಣಾಟಲಕ್ಷಣವಿ
ಭಾಗ ಮದ್ವರದ ಬಸವೇಶ್ವರಪುರಾಣಾರ್ಥ
ಭೋಗಿಯೆನಿಸುವ ಶೀಲಸಂಪನ್ನ ಮಲ್ಲಣಾರ್ಯರ ಪದಾಂಬುಜಕೆ ಶರಣು ॥ ೧೧ ॥

ಚಿರಸುಖದ ಗೊತ್ತು ಕಲ್ಪದ್ರುಮದ ಬಿತ್ತು ಬ
ಲ್ಗರುವಿಕೆಯ ನೆಱೆಪೊತ್ತು ಸನ್ಮಾರ್ಗದೊಲವೆತ್ತು
ವರವೀರಶೈವಸಂಪನ್ನಿಕೆಯೊಳುಱೆ ಮುತ್ತು ಗುರುಲಿಂಗಜಂಗಮಕ್ಕೆ ।
ಉರುದೇಹಮುಂ [1]ಮನಮುನರ್ಥಮುಂ[1] ಕೂರ್ತಿತ್ತು
ಶರಣಸಂದೋಹದೊಳು ನೆಱೆಮೆಱೆದು ನಿಜಮುಕ್ತಿ
ತರುಣಿಯಾಲಿಂಗನಂಗೆಯ್ದ ಸೋಲೂರ ಭಾಸುರ ಚಿಕ್ಕಬಸವ ಶರಣು ॥ ೧೨ ॥*

ವರಶೇಷನೆನ್ನೊಳಗೆನಿಪ್ಪ ವಾಲ್ಮೀಕಿಯಂ
ಉರು [2]ಕಾವ್ಯ[2] ನಾಟಕಾಧೀಶ್ವರ ಮಯೂರನಂ
ಪರಮಕವಿತಾರಂಭದಗ್ರಣಿ ಹಲಾಯುಧನ ಕವಿಕುಮುದ ಸೋಮೇಶನಂ ।
ಸರಸಕವಿಕರ್ಣದಿವ್ಯಾಮೃತಸುಭೋಜನಂ
ಸ್ಮರಬಾಣದುನ್ನತಿಯ ಬಾಣನಂ ನೆನೆದು ಬಿ
ತ್ತರಿಸುವೆಂ ಕೇರಳಾಧೀಶ್ವರ ಚರಿತ್ರಮುಂ ಲಾಕ್ಷಣ್ಯಮಯಗಾತ್ರಮುಂ ॥ ೧೩ ॥

---

[1] ಮನಸುಮರ್ಥಮುಂ (ಕ). * ೧೨ನೆಯ ಪದ್ಯವಾದಮೇಲೆ 'ಇದು ಚಿಕ್ಕಬಸವಯೆಂಬ ಐದಕ್ಷರದ ಪದನು' ಎಂಬ ಗದ್ಯವಿದೆ. [2] ವಾಕ್ಯ (ಕ).

ಅರಸನರ್ಥವನಿತ್ತು ಶರಣರ್ಗೆಯಾ ಕೆಱೆಯ
ಮರುಳಿಂದೆ ಕಟ್ಟಿಸುತ ಬಯಲಾದ ಹಿರಿಯ ಪ
ದ್ಮರಸರವರಣುಗನುಱೆ ರಾಮಾನುಜನ ಶಿಷ್ಯನಂ ಭಂಗಿಸುತ್ತಾತನ ।
ಪೊರೆದನಂ ವೀರಬಲ್ಲಳನ ಸಭೆಯೊಳಗಿರ್ದು
ಕರಮುರ್ದನಂಗೆಯ್ದು ಮಹಿಮೆಗವನಿಪನೆಱಗೆ
ಬರುತ ಹಂಪೆಯೊಳೀಶಭಕ್ತರಂ ನುತಿಸಿದ ಹರೀಶನಂ ಬಲಗೊಂಬೆನು ॥ ೧೪ ॥

ಘೋರಸಂಚಿತಕರ್ಮವಂ ಸುಟ್ಟು ನಿಜಹಸ್ತ
ವಾರಿಜವನೆನ್ನ ಮಸ್ತಕದೆಡೆಯೊಳೊಲಿದಿಟ್ಟು
ಚಾರುಕರ್ಣಕ್ಕೆ ಶಿವಮಂತ್ರದೇಳ್ಗೆಯ ಕೊಟ್ಟು ರಾಜಿಸುವ ಮಹಿಮೆವಟ್ಟು ।
ಆರೈದು ಭವತತಿಯ ತೀರ್ಚಿ ಸುಖಮಂ ಸಾರ್ಚಿ
ಚಾರುಲಿಂಗದ ಸೇವೆಗಳವಡಿಸಿದುರುಕೀರ್ತಿ
ಧೀರಚಿಕವೀರೇಶಮೂರ್ತಿ ವಿಗತಾನತಜನಾರ್ತಿ ಜಯ ಪರವೆ ಗುರುವೆ ॥ ೧೫ ॥

ಆ ಮಹಾಸದ್ಗುರೂತ್ತಮನ ಪಾವನಹಸ್ತ
ತಾಮರಸ ಸಂಭೂತ ಸನ್ಮಾರ್ಗವಿಖ್ಯಾತ
ರಾಮಣೀಯಕಸುಶೀಲವ್ರತಾಚಾರಿ ಸುಜ್ಞಾನಿ ಸನ್ಮಾನಿ ತನ್ನ ।
ಕಾಮಿನಿಗದಲ್ಲದೆಳಸದ ಚಿತ್ತ ಸುಜನಸುರ
ಭೂಮಿರುಹನಾದಯ್ಯ ಸಿರಿಯಾಳನನ್ವಯೋ
ದ್ದಾಮನೆಂದೆನಿಸುವಂ ಚಿನ್ಮಯದ ಘಟ್ಟಿಯಂತಾ ನಾಗಲಿಂಗಸೆಟ್ಟಿ ॥ ೧೬ ॥

ಅಕ್ಷಮಾಧರ ನಾಗಲಿಂಗಿಸೆಟ್ಟಿಯರ ನಿಜ
ಕುಕ್ಷಿಸಂಭವವಿಭವ ಶಿವಭಕ್ತಿಯುತಶರಣ
ಪಕ್ಷ ಸೂನೃತವಾಕ್ಯ ಸಕಲಪುರುಷಾರ್ಥಿ ಧನಕನಕದೊದವಿನಿಂದಂ ।
ತ್ರ್ಯಕ್ಷ ಪೂಜಾನಿಷ್ಠ ರಾಜಪೂಜ್ಯಂ ಹೃದಯ
ನಿಕ್ಷಿಪ್ತ ಗುರುಪಾದನಾದ ಸಮ್ಮೋದಂ ಮು
ಮುಕ್ಷುಮಾರ್ಗಂ ವಶೀಕೃತಭರ್ಗನರರೆ ಗಂಗಪ್ಪನತಿಶಯದೊಳಿಪ್ಪಂ ॥ ೧೭ ॥

ಆ ರಮ್ಯ ಗಂಗಪ್ಪಸೆಟ್ಟಿಯರ ಗರ್ಭಾಬ್ಧಿ
ಚಾರುಚಂದ್ರಂ ಸತ್ಕಲಾಲಕ್ಷಣಂ ಶಿವಪ
ದಾರಾಧಕನನೆನ್ನನೀಕ್ಷಿಸುತ ನುಡಿದರುತ್ತಮರು ಸತ್ಪ್ರೌಢರ್ಕಳು ।
ಚೇರಮಾಂಕಾ ಶಿವನ ಪುರಕೆ ಧಾಳಿಯನಿಟ್ಟ
ಚೇರಮಚರಿತ್ರಮಂ ಸಕಲಸಜ್ಜನರ ವಾ
ಚೇರಮಾಂಕರಮಾಗಿ ಪೇಳೆಂದ ಸದ್ಭಕ್ತರಾಣತಿಯೊಳಾಂ ಪೇಳ್ವೆನು ॥ ೧೮ ॥

ಬಿಟ್ಟಕಣ್ಣವರೂರ ಸುಧೆಯ ಸವಿ ಮನವಲರ್ದು
ನಟ್ಟು ಕೂಡುವ ಲತಾಂಗಿಯ ಸೋಂಕು ಪುಳಕವಳ
ವಟ್ಟು ಹಾಡುವ ಗಾನರಸದಿಂಪು ಜಾಜಿಯೊಳ್ಪರಲಕಂಪುಗಳ ಸೊಂಪು ।
ಕಟ್ಟಕ್ಕಜಾನ ಸುತನ ರೂಪು ನಲ್ಪಿನ ಸೈಪು
ಮುಟ್ಟ ಪಂಚೇಂದ್ರಿಯಂ ನಲಿವವೊಲ್ ಗಂಗಪ್ಪ
ಸೆಟ್ಟಿಯಾತ್ಮಜ ಚೇರಮಂ ಪೇಳ್ದ ರಸಕಾವ್ಯವೆನೆವುದಖಿಳರಿಗೆ ಸೇವ್ಯ ॥ ೧೯ ॥

ಪಿರಿದು ವೇದಾಂತಸಿದ್ಧಾಂತಲಕ್ಷಣವೈದ್ಯ
ಭರತಸಾಮುದ್ರಿಕಂ ಜ್ಯೋತಿಷವಲಂಕಾರ
ಸರಸಗೀತಂ ಪಾದ್ಯಶಕುನಸದ್ವ್ಯಾಕರಣಸೂಪರತಿಶಾಸ್ತ್ರದೊಳಗೆ ।
ಪರಿಣತನೆನಿಪ್ಪ ಸತ್ಕವಿಮಲ್ಲಣಾರ್ಯಗುರು
ವರನ ಕೃಪೆಯಿಂ ಪಡೆದು ಚೇರಮಾಂಕಂ ಶಿವನ
ಪುರಕೆ ಧಾಳಿಯನಿಟ್ಟ ಚೇರಮಚರಿತ್ರಮಂ ಪೇಳ್ದನೆನೆ ಮೆಱೆವುದರಿಂದೆ ॥ ೨೦ ॥

ಸತಿಸಪ್ತಮಿಗಳ ಸಮಸಂಸ್ಕೃತಂಗಳನು ತದಿ
ಹಿತಮಂ ಕ್ರಿಯಾ ಗಮಕ ವರ ಸಮಾಸಂಗಳಂ
ಕೃತಜಾತಿಭಾವಾದ್ಯಲಂಕಾರಮಂ ವಿನುತ ಮುಖ್ಯಸತ್ಪ್ರಾಸಂಗಳಂ ।
ವಿತತ ಶೃಂಗಾರಾದಿ ರಸನಾಯಕಾದಿಗಳ
ಗತಿಗಳಂ ನೋಡಿ ತಪ್ಪಿರೆ ತಿದ್ದಿಯಾಂ ನಿಮ್ಮ
ಸುತನಲಾ ಶಿವಕವೀಶ್ವರರು ವಿದ್ಯಾಕರರು ಶಂಕರಧ್ಯಾನಪರರು ॥ ೨೧ ॥

ಕಸನೊಳೊಡವೆರದ ಚಿನ್ನದ ರಜವನಾ ಪಾದ
ರಸವದಂ ಗ್ರಹಿಸಿಯರ್ಥವನುಂಟುಮಾಳ್ಪಂತೆ
ರಸಿಕರೆನ್ನಯ ಕೃತಿಯೊಳುಳ್ಳ ಲೇಸಂ ಕೊಂಡು ತಪ್ಪಿರಲು ತಿದ್ದಿ ಸಲಹಿ ।
ರಸವನುಳಿದಾ ಸದೆಯನೇ ಧಾರೆವಟ್ಟಲಸ
ವಸದಿ ಪಿಡಿವಂತಪ್ಪ ದುರ್ಜನರ ನುಡಿಯ ಬಂ
ಧಿಸುವ ಸಾಮರ್ಥ್ಯವೆಮಗುಂಟಂತುಗೆಯ್ಯದೆ ಹಿತಂಮಾಳ್ಪೆವೆಂತೆಂದೊಡೆ ॥ ೨೨ ॥

ರಸಭಾವ ಜಾತಿಮಾಧುರ್ಯ ಸುಕುಮಾರಾರ್ಥ
ವೆಸವ ಪೊಸರೀತಿಬರಲನುಮಾನಿಸುತ್ತಿರ್ದೆಯ
ದಸಿ ತಾಗಿದಂತೆ ನೊಂದಿನಿಸೆಡರಿದವೊಲಿರಲು ಗ್ರಹಹೊಡೆದ ಕೋತಿಯಂತೆ ।
ದೆಸೆದೆಸೆಗೆ ತಿರುಗಿ ಭಂಡಿಸುವನ್ಯಖೂಳಮಾ
ನಿಸರೊಳಾಡಿ ಸ್ನೇಹಮಂ ಮಾಳ್ಪೆನುಱೆ ಕಾಲ
ಹಿಸಿತಿಂಬ ಶಂಕೆಯಿಂದಾ ಪಾದರಕ್ಷೆಗೆ ತೈಲಮಂ ಮೊದಲೆ ತೀಡುವಂತೆ ॥ ೨೩ ॥

ನಾರದನ ಬಿನ್ನಪಕೆ ಭಸಿತಕಾಯನ ಶಿವಂ
ಧಾರುಣಿಗೆ ಕಳುಪೆ ಚೇರಮನೆನಿಸಿ ರಕ್ಷಾವಿ
ಚಾರಮಂ ಪರಕಲಿಸಿ ಭವನನುಜ್ಞೆಯ ಭದ್ರಗಾಯಕಂಗಿಷ್ಟವಿತ್ತು ।
ಆ ರುಚಿರ ನಂಬ್ಯಣ್ಣನೊಡನಿರ್ದು ಬಳಿಕವಂ
ಮಾರಾರಿಯೂರ್ಗೆಯ್ದೆ ಹಿಂದೆ ಧಾಳಿಯ ಪೋಗಿ
ಚಾರುಕಾವ್ಯವನಲ್ಲಿ ಕೇಳಿಸಿದನೆಂಬ ಕಥೆಯಿದಕೆ ಮೊದಲಾವುದೆನಲು ॥ ೨೪ ॥

[1]ಸಲೆ[1]ಜಲಂಧರನ ತಲೆಯಂ ಕೊಱೆ[3]ದಿಡಲ್ಕೆಂದು
ಮಲಹರಂ ತನ್ನಂಗುಟದಿನೊತ್ತಿ ಬರೆಯಲು
ಜ್ವಲಿಪ ಜಲಚಕ್ರವೊ ಚಾರುಜಂಬೂದ್ವೀಪ[2]ವೆಂಬ ಭೂಮಧ್ಯದಲ್ಲಿ[2] ।
ಜಲಜೋದ್ಭವಂ ಸುವರ್ಣಾಚಲವೆನಿಪ್ಪ ನಿ
ರ್ಮಲಹೇಮಸಂಪಗೆಯ ವೃಕ್ಷಮಂ ಬಿತ್ತಿ ತ
ದ್ವಲಯದೊಳ್ತವೆಯದಂತೆಱೆ[3]ದ ನೀರೆನೆ ಧರೆಯ ಬಳಸಿ ಸಾಗರಮೆಸೆವುದು ॥ ೨೫ ॥

ಕರಿಯ ವನವೋ ಹರಿಯ ತಳ್ಪವೋ ಭಾವಿಸಲು
ಸಿರಿವೆಣ್ಣ ಸೂತಿಕಾಗೇಹವೋ ರನ್ನಂಗ
ಳಿರಿಸಿದ ಕರಂಡವೋ ಮಕರಮೀನಾಳಿ ಕರ್ಕಾಟಕಂಗಳ ರಾಸಿಯ ।
ಸುರಿದ್ಯಕಣನೋ ವಾಡಬಂ ಪೊರೆವ ಕೊಯಿಗುಱಿಯೊ
ಸುರಪ[3]ಗಗಿದೋಡಿ[3]ದಹಿತರು ಬಲಿದ ಜಲದುರ್ಗ
ದಿರವೊ ಪೇಳೆನೆ ಮೆಱೆ[3]ದುದರರೆ ಬಹುಬಂಧುಭೂಪರಿವೃತ್ತವಾದ ಸಿಂಧು ॥ ೨೬ ॥

ಶರಧಿಪರಿವೃತ್ತಮಾದವನಿಮಧ್ಯದೊಳು ವಾ
ರಿರುಹಭವನಾ ಚಂದ್ರಸೂರರೆಂದೆಂಬ ಚೆ
ಲ್ವರಸುಗಳ ಮಲ್ಲಸಾಧನೆಗೆಂದು [4]ಸವೆದು[4] ತಂದಿಟ್ಟ ಕನಕಸ್ತಂಭವೊ ।
ವರಕಮಠನೇ ಸಿಂಬಿಯುರಗಪತಿಗಳೆ ವಸುಂ
ಧರೆ ಮಿಱುಪ ಹರಿಯಾಣವಾಗೆ ಪಾತಾಳ ಜಲ
ತ[5]ರು[5]ಣಿ ತಾಳ್ದುರೆ ನಿಂದ ಹೇಮಕಳಸಂಬೊಲೆಸೆದಿರ್ದುದಾ ಚಾರುಮೇರು ॥ ೨೭ ।

ಚಾರುಲೋಕಾಲೋಕಶಿಖರಿ ಬಳಸಿದ ಬೇಲಿ
ವಾರಿನಿಧಿ ಬಾವಿ ಜಂಬೂದ್ವೀಪವೇ ವಾಟಿ
ಬೇರು ಫಣಿಪತಿ ತಳಿರು ಪಸುರೆಲೆಗಳೇ ಕೆಂಪು ಪಚ್ಚೆನಿಡುಗಲ್ಲೆ ಶಾಖೆ ।
ತಾರಗೆಗಳೇ ಕುಸುಮವಾ ಫಲಂಗಳೆ ಚಂದ್ರ
ಸೂರರೆಱಗುವ ಪಕ್ಷಿಗಳೆ ಖೇಚರರ್ಕಳೆನೆ
ರಾರಾಜಿಸುತ್ತಿರ್ಪುದರರೆ ಸುರಹೊನ್ನೆಯ ಮರಂ ದಲೆಂಬಂತೆ ಮೇರು ॥ ೨೮ ॥

---

[1] ಬಲು (ಗ). [2] ವೆಂಬಾಲವಾಲವಿಟ್ಟು (ಗ). [3] ಗಾಗೋಡಿ (ಗ). [4] ಮಾಡಿ (ಕ). [5] ರ (ಕ).

ಆ ಮಹಾಮೇರುವಿಂಗುತ್ತರಾಸೆಯೊಳು ಗಿರಿ
ಜಾಮನೋಹರನ ಭರಭಾರಮಂ ಧರಿಸುವಡೆ
ಭೂಮಿಯೊಳು ತಾನಲ್ಲದಿಲ್ಲವೆಂಬಂತಧಿಕತರಸತ್ವರಾಸಿಯಾಗಿ।
ದಾಮೋದರಾಜಸುರಪರ ಕಣ್ಣ ಪುಣ್ಯವಿಂ
ತೀ ಮಹೀಧರವಾದುದೆನೆ ರಾಜಿಪ್ಪುದುಱೆ
ರಾಮಣೀಯಕಮಾಗಿ ಮಿಸುಪ ಬೆಳ್ಳಿಯ ಬೆಟ್ಟವದ ನೋಡೆ ರುದ್ರಪಟ್ಟ ॥ ೨೯ ॥

ಗಿರಿಜಾವಿವಾಹದೊಳಗಾ ಸದಾಶಿವ ಗಣೇ
ಶ್ವರನೊಡನೆ ಬಂದಗಸ್ತ್ಯಂ ಮೆಟ್ಟಲಿಳಿದ ಭೂ
ಧರವಿಂಧ್ಯವಂತಪ್ಪ ಕುಂಭಜರ ಕೋಟಿಯುಂ ತಳೆದ ರಜತಾದ್ರಿಗೆಣೆಯೆ।
ಮರಳಿಯಾತನ ಶಿಷ್ಯ ನಳನೀಲರುಗಳೆಸೆವ
ಕರದಲ್ಲಿ ಲಘುವಾದ ಭೂರಿಪರ್ವತವವರ
ಸರಿಗೆ ಮಿಗಿಲೆನಿಪ ಪವನಜರಗಣಿತವನುಳ್ಳ ಬೆಳ್ಳಿವೆಟ್ಟಕ್ಕೆ ಸಮವೆ ॥ ೩೦ ॥

ಮಱುಜೇವಣಿಯು ಹೊರೆಯೊಳಿರ್ದು ಹೊರೆಯೇಱು ನಲಿ
ದುಱುವಮರ್ದನೀಂಟಿ ಸುರಪಶುಗಳ ಪಯೋಧರಂ
ನೆಱೆ ತೊರೆದು ಕರಮೊಸರ್ವ ಪಾಲೊಜ್ಜರಂಗಳಿಂ ಬೆಳೆವ ಸುರಕುಜ ನಿಕರದಿಂ।
ಉಱುವ ಸುರಕುಜದ ತಣ್ಣೆಳಲೊಳಗೆ ಮೋಹದಿಂ
ಪೆಱೆದಲೆಯುನಂ ಪೂಜಿಸುವ ಪುರುಷಮೃಗಕವರ
ಮಱೆಗಳೊಡರಿಚುವ ಶಿವಸೇವೆಯಿಂದಾ ಗಿರಿಯು ತಪ್ಪಲೊಪ್ಪುತ್ತಿರ್ದುದು ॥ ೩೧ ॥

ಮಿಗೆ ಬೆಳ್ಳಿವೆಟ್ಟದಗ್ರದೊಳು ಕೈಲಾಸಪುರ
ದಗಳಮೃತಮಯಘಾತದಿಂ ಮಿಸುನಿಗೋಂಟೆಯಿಂ
ದೊಗುಮಿಗೆಯ ಕೆಂಬಲರ ತೆನೆಗಳಿಂ ಪಚ್ಚೆಯಾದಾಳ್ವರಿಯ ಸೈಪಿನಿಂದ।
ಬಗೆವೆತ್ತ ಪವಳ ಡೆಂಕಣಿಗಳಿಂದಂ ಮುತ್ತು
ಬಿಗಿದಟ್ಟಣಗಳಿಂದೆ ಬಜ್ಜರದ ಸಿಯ್ಯದರ
ದಗಣಿತದ ನೇಸಱಗ್ಗಳವೆಳಗಿನೇಳ್ಗೆಯಿಂ ಝುಗಝುಗಿಸುತೊಪ್ಪಿರ್ದುದು ॥ ೩೨ ॥

ಬಳಸಿದಮರಾವತಿಯು ನಗರಿ ತೇಜೋವತಿಯ
ಪೊಳಲು ಸೈಯಮನಿ ರಕ್ಷೋವತಿ ಬಳಿಕ್ಕಧಿಕ
ಬಳವಂತ ಶುದ್ಧವತಿ ಗಂಧವತಿಯುಳಕಾಪುರಂ ಕಾಂತಿವತಿ ಪಹರಿನು।
ನಿಳಯಂಗಳವಱಧಿಪರಿಂದ್ರಾಗ್ನಿಯಮನಿರುತಿ
ಜಳಧಿಪತಿಮರುತಯಕ್ಷೇಶಾನರೆನಿಸುವ
ಗ್ಗಳರಲ್ಲಿ ಕಾಪಿನವರೆನೆ ಮೆಱೆದುದಾಹ ಕೈಲಾಸವೀಶನ ನಿವಾಸ ॥ ೩೩ ॥

ಸಾಮರ್ಥ್ಯರುದ್ರರಗ್ಗಳದ ಕಾಯ್ಪಿಂದೆ ನಿ
ಸ್ಸೀಮವೃಷಭಧ್ವಜಂಗಳ ಕೊತ್ತಳಂಗಳಿಂ
ರಾಮಣೀಯಕ ಗಣಂಗಳ ನಿವಾಸಂಗಳಿಂ ಸ್ಫಟಿಕರತ್ನದ ಹರ್ಮ್ಯದ ।
ಸೋಮಸೂರ್ಯರ ವೀಧಿಯಿಂ ಬೆಳಗ ಬೀಱುವ ಮ
ಹಾಮಹಿಮರಾಲಯಂಗಳ ಮಧ್ಯದೊಳ್ಮೆಱೆದು
ಧಾ ಮಹಾದೇವನುತ್ತಮರಾಜಧಾನಿ ಯಮಕಾಮರುನ್ನತಿಯ ಹಾನಿ ॥ ೩೪ ॥

ಒಳಗಣವಸರದವರು ಸಿದ್ಧರಾಮಂ ಭೃಂಗಿ
ಗಳು ನಿಷ್ಠನೋಹಿಲಾಧೀಶ ಘಂಟಾಕರ್ನ
ರಳವಟ್ಟ ಪಹರಿಯವರಾ ನಂದಿಕೇಶ್ವರಂ ನಲಿದು ಬಾಗಿಲ್ಕಾವನು ।
ಬಳವಂತನರಮನೆಯ ಗುಜ್ಜನಾ ಕುಂಭಜಂ
ಎಳಸಿ ಕನಕಾದ್ರಿಯೆಂಬುಪ್ಪರಿಗೆಯೆಡೆಯಲ್ಲಿ
ಗಳಿಯಾರದವರಿಂದುಸೂರ್ಯರೆನೆ ಭೋಗಮಲ್ಲೇಶರಾಯಂ ಮೆಱೆದನು ॥ ೩೫ ॥

ಆ ಸಮಯದಲ್ಲಿ ಬಾಗಿಲೊಳಿರ್ಪ ಹರಿಯಜರು
ವಾಸವಾದ್ಯಖಿಳ ದಿಕ್ಪಾಲಕರು ಮನುಮುನಿಗ
ಳೋಸರಿಸದಧಿಕ ಗಂಧರ್ವರಂತಾ ನಂದಿಕೇಶನಾಣತಿಯ ಪಡೆದು ।
ಭಾಸುರಮಹಾದೇವದೇವ ಪರಮೇಶ್ವರ ವಿ
ಲಾಸಮೂರುತಿ ಜಯ ಉಘೆಯೆನುತ್ತೊಳಪೊಗು
ತ್ತೀಶಂಗೆ ಸಾಷ್ಟಾಂಗದಿಂದ ವಂದಿಸಿ ಸಮುಚಿತಾಸನಂಗಳೊಳಿರ್ದರು ॥ ೩೬ ॥

ಸುರಸಮೂಹಂಗಳಿಂ ಕಿನ್ನರರ ನಿವಹದಿಂ
ಗರುಡರೊತ್ತೊತ್ತೆಯಿಂ ಗಂಧರ್ವಕೋಟಿಯಿಂ
ತುರಗಸಂಚಯದಿಂದೆ ವಿದ್ಯಾಧರಾಳಿಗಳ ಪಂಙ್ತಿಯಿಂದಂ ಮನುಗಳ ।
ನೆರವಿಯಿಂ ಬ್ರಹ್ಮಾಂಡ ಕರ್ತೃಗಳ ಗಡಣದಿಂ
ವರರಂಭೆಯೂರ್ವಶಿ ಮುಖ್ಯ ಸಂದೋಹದಿಂ
ದರರೆ ರಾಜಿಸಿದುದಂತಾ ಸಭಾಸ್ಥಾನವತ್ಯಧಿಕ ಸುಖಮಯವಿತಾನ ॥ ೩೭ ॥

ಸಿಂದೆಡಬಲಂಗಳೊಳಗಿಂದುಸೂರ್ಯರು ಕಿರಣ
ವೆಂದೆಂಬ ಚಾಮರವನಿಕ್ಕಲ್ಕೆಯೂರರೆ
ಯ್ತಂದು ಸೀಗುರಿಯಿಡೆ ಬಜವಣೆ ಸೇವಣೆಯಾಹತಾಂದೋಳ ಮುಖ್ಯಂಗಳಿಂ ।
ಮುಂದೆ ತುಂಬುರ ನಾರದರು ವೀಣೆಯಂ ನುಡಿಸ
ಲಂದು ಸಾಲೋಕ್ಯ ಸಾಮೀಪ್ಯ ಸಾರೂಪ್ಯದೊಡ
ನೊಂದಿರ್ದ ಸಾಯುಜ್ಯರಿಂದೆ ರಾಜಿಸಿದುದಾನಂದಮಯನೊಡ್ಡೋಲಗಂ ॥ ೩೮ ॥

ಇಳೆಯ ಘುಡುಘುಡಿಸಿ ಬಗಿದಾ ಶೇಷನಂ ಕಿಳ್ತು
ಸೆಳೆದು ದಿಕ್ಕರಿಗಳಂ ಬೀಱಿ ತಿಱ್ಱನೆ ತಿರುಪಿ
ಘುಳುಘುಳಿಸಿ ಕಮಠನಿದ್ದೆಡೆಗೆ ಬಾಗಿಸಿ ಧ್ರುವನ ಮುಂದಲೆಯ ಕಟ್ಟಿ ಸಪ್ತ ।
ಜಳಧಿಗಳನೊಕ್ಕುಡಿತೆಮಾಡಿ ವಡಬನ ತೆಗೆದು
ತಿಲಕವಿಡುತಖಿಳಜಾಂಡಂಗಳಂ ಸೆಂಡಾಡಿ
ಮುಳಿವುಗ್ರಗಣನಾಥರಿರ್ದರಾ ರಜತಗಿರಿನಿಲಯನೊಡ್ಡೋಲಗದೊಳು ॥ ೩೯ ॥

ಸ್ವರ್ನಿವಾಸದೊಳುರ್ವಶಿಯ ಗೆಲ್ವೆನೆಂದು ಬಂ
ದರ್ಣವದ ತೀರದೊಳು ರಂಭೆ ಶೋಕಿಪ ಗೀತ
ವರ್ಣನೆಗೆ ಸೋಲ್ತವಳ ತರಲೆಂದು ಕಳುಪೆ ನೆರೆದಾ ಹರಿಯ ತಲೆಗೂದಲ ।
ಚೂರ್ಣವಾಗಲ್ಕಿತ್ತ ತದ್ವಿಷ್ಣುವಂ ತೊಡೆಯ
ಕೀರ್ಣರೋಮದಲೊಂದು ಕುಳಿಯೊಳಿಳುಪಿದ ಶಂಕು
ಕರ್ಣ ರೋಮಜಮುನಿಗಳೊಪ್ಪಿದರು ಭಾಪು ಪರಿಪೂರ್ಣನ ಸಭಾಂತರದೊಳು ॥ ೪೦ ॥

ತಲೆಯೆತ್ತಿ ನೋಡದಿರು ಬೊಮ್ಮಸಿರಿಯುಂಟೆಂಬ
ಬಲುಗರ್ವವುಡುಗು ಹಂಭೋಗಮದವಂ ಪಿಂಗು
ಪಲಗಣ್ಣ ಗರುಡರು ವಿಹಂಗಮರು ಪೊದ್ದದಿರಿಯುರಗರ ಮಯೂರರ್ಕಳ ।
ನೆಲೆಯತ್ತ ಕುಳ್ಳಿರದಿರಸುರರಮರರ ಕಡೆಯ
ನೆಲನ ಸಾರದಿರೆಂದು ನಂದಿ ಮಹಕಾಳರಾ
ಮಲಹರನ ಸಭೆಯೊಳನಿಬರ ಜಡಿವುತೊಪ್ಪಿದರು ಸೌಂದರರು ವೇತ್ರಕರರು ॥ ೪೧ ॥

ಮಂಡಿತಾಗಮಕತೀತದ ಪರಬ್ರಹ್ಮವಿದೆ
ಚಂಡಕರಕಧಿಕತೇಜಸ್ಫೂರ್ತಿಯಿದೆ ಕಮಳ
ಜಾಂಡಕೋಟಾಕೋಟಿಗರ್ಭನಿಕ್ಷಿಪ್ತರಕ್ಷಾವಸ್ತುವಿದೆ ಗಿರಿಜೆಯ ।
ಗಂಡನಾಗಿರ್ದು ಕಾಮನ ಸುಟ್ಟ ಸುಜ್ಞಾನ
ಪಿಂಡವಿದೆಯೆಂದು ಕೈಯೆತ್ತಿ ಪೊಗಳುತ್ತಿರ್ಪ
ಚಂಡಕೀರ್ತಿಗಳನಭವಂ ನಿಲಿಸಿ ತತ್ಸಭೆಯ ಬೀಳುಕೊಡಲುಜ್ಜುಗಿಸಿದಂ ॥ ೪೨ ॥

ಒಲಿದು ಶರವಂ ಬೊಮ್ಮನಂ ತ್ರಿಶೂಲಾಗ್ರಮುಮ
ನಲುಗಿ ಹರಿಯುಂ ನೋಡಿ ಸುರಪನಂ ನುಡಿಸಿ ನಿ
ರ್ಮಲನಾ ಬೃಹಸ್ಪತಿಯ ಶೇಷನಂ ಷಣ್ಮುಖನ ಮುದ್ದಾಡಿ ವಿಘ್ನೇಶನ ।
ತಲೆದಡವಿ ಮುನಿಗಳಂ ಮನ್ನಿಸುತ ಮಿಕ್ಕರಂ
ಪಲವು ಸನ್ನೆಗಳಿಂದೆ ಬೀಳ್ಕೊಟ್ಟನಾನತರ
ಸುಲಭನಾ ಭೋಗಮಲ್ಲೇಶ ಚಿದ್ಘನಕೋಶನತ್ಯಧಿಕಸುಪ್ರಕಾಶ ॥ ೪೩ ॥

ಆ ಮಹಾವೇಳೆಯೊಳು ವೀರಭದ್ರಂ ನಂದಿ
ಸಾಮರ್ಥ್ಯ ಸಾನಂದನುಪಮನ್ಯು ಭೃಂಗಿ ನಿ
ಷ್ಕಾಮಿ ರೇಣುಕದಾರುಕಾಧಿಕರು ಭಸಿತಕಾಯಂ ಸಹಿತ ಪರಿಮಿತದೊಳು ।
ಸೋಮಶೇಖರನುಮಾದೇವಿಯೊಳ್ಮೆಱೆವುತಿರೆ
ಪ್ರೇಮದಿಂದಲ್ಲಿಗಾ ಸಮಯವಱಿದೆಯ್ತಂದು ನುತಿಸಿದಂ
ಶ್ರೀಮುನಿಪ ನಾರದಂ ವೀಣಾವಿಶಾರದಂ ಶಿವಶಿರಃಶಿಖಿನೀರದಂ ॥ ೪೪ ॥

ದೇವ ಶುದ್ಧಸ್ಫಟಿಕಸಂಕಾಶ ಜಗದೀಶ
ದೇವ ಭಸಿತಾಂಗ ಮನ್ಮಾನಸಾಂಬುಜಭೃಂಗ
ದೇವ ಪಾವನಪಾದ ಘನತರದ ಸರ್ವಮೋದ ಪಾಹಿ ಪುರದಾಹಿಯೆಂದು ।
ಆ ವಿಮಲ ಮುನಿವರಂ ಸಾಷ್ಟಾಂಗದಿಂ ನಮಿಸಿ
ಭಾವಶುದ್ಧದೊಳಿದ್ದು ಕೈಮುಗಿದು ನಿಲೆ ಕಂಡು
ಮಾವರಂ ನಸುನಗುತ್ತೆಲ್ಲಿಂದ ಬಂದೆಯೆನೆ ಬಿನ್ನವಿಸಿದಂ ನಾರದಂ ॥ ೪೫ ॥

ಕಾಶಿ ಕೇತಾರ ಗಯೆ ಸಿರಿಸೈಳ ಕಾಳಹ
ಸ್ತೀಶನಗರಂ ಕಾಂಚಿ ಮಧುರೆ ಸೇತುವಿನ ರಾ
ಮೇಶ ತಿರುವಾರೂರ ಪೊನ್ನಾಂಬಲಂ ಮುಖ್ಯ ಶಿವನಿಳಯಮಂ ನೋಡುತ ।
ದೇಶಕಗ್ಗಳವೆನಿಪ ಕೇರಳಕೆ ಬಂದೆನಘ
ನಾಶ ತಿರುವಂಜಕಳನಾಥನಂ ದಿವ್ಯ ಸಂ
ಕಾಶಗಣಯೂಥನಂ ವರವೃಷವರೂಢನಂ ಕಂಡೆನಾನಂದದಿಂದೆ ॥ ೪೬ ॥

ಆ ವಿಮಲ ಪಾಂಡ್ಯಮಂಡಲ ಚೋಳದೇಶಕ್ಕೆ
ಭೂವರಾಧಿಪರು ಸೌಂದರಪಾಂಡ್ಯನುಂ ದಿವ್ಯ
ಭಾವಿ ಚೋಳರು ಮುಖ್ಯರುಂಟಭವ ಚೊಕ್ಕನೈನಾರು ಪಾಲ್ಮೀಕೇಶನ ।
ಸೇವೆಗೆಲೆ ಜೀಯ ಕೇರಳದ ತಿರುವಂಜಕಳ
ದೇವಂಗೆ ಭಕ್ತನಪ್ಪಂತೊರ್ವ ರಾಯನಂ
ನೀವು ಕಲ್ಪಿಸಿ ಕಳುಪಬೇಕೆಂದು ಮರಳಿ ಸಾಷ್ಟಾಂಗದಿಂ ಮುನಿ ನಮಿಸುತ ॥ ೪೭ ॥

ದೇವ ಮುನ್ನಂ ಶಿವನ ಪುಷ್ಪಮಂ ವಾಸಿಸಿದೊ
ಡಾ ವರಮುನೀಶ ಶಾಪದೊಳು ವೈಷ್ಣವ ಚೋಳ
ಭೂವರಂ ಮಣ್ಣಮಳೆಯಿಂ ಮಡಿಯೆ ಶಿವಭಜನೆಯಾನೆಯವನಣುಗನಾಗಿ ।
ಕಾವೇರಿಯಂ ಕಟ್ಟಿ ಕಾಳಿವಿಟ್ಟಿಯ ಕಣ್ಣ
ನೋವಿ ತೆಗೆದಿತ್ತು ನಿನ್ನ ಬಿಟ್ಟಿಗೆಯ್ಸಿದ ಮ
ಹೀವರಗೆ ಕರಿಕಾಲಚೋಳಗೆಣೆಯಪ್ಪನಂ ಕಳುಪೆಂದು ಬಳಿಕೆಱಗಿದಂ ॥ ೪೮ ॥

ನಾರದನ ಬಿನ್ನಪವನವಧರಿಸುತೀಳ್ಕೈ ವಿ
ಶಾರದಮುನೀಶ್ವರಾ ನೀನೆಮ್ಮ ಪೂಜಾವಿ
ಚಾರಮಂ ಕುಱಿತು ಪೇಳಿದೆಯ್ಯೆಸಲೇ ಲೇಸು ಲೇಸೆನುತ ಕೆಲದೊಳಿರ್ದ ।
ಆ ರಮ್ಯ ಭಸಿತಕಾಯನ ಮೊಗಂ ನೋಡುತ್ತ
ಧಾರುಣಿಗೆ ನೀಂ ಪೋಗಿ ರಾಯನಾಗ್ಯೆ ಚೇರ
ಕೇರಳಕ್ಕೆನೆ ಭೀತಿಯಿಂದ ಬಿನ್ನೈಸಿದನುಮಾಪತಿಗೆ ಶರಣಗತಿಗೆ || ೪೯ ||

ದೇವ ಚಿತ್ತೈಸು ರಾಜ್ಯಾಂತರಂ ನರಕವೆಂ
ಬಾ ವೇದವುಂಟಯ್ಯ ನಿನ್ನಣುಗನಾದೆನ್ನ
ಭೂವರನ ಮಾಡಲೇಕೆನೆ ನುಡಿದನೀಶನಂಜದಿರು ಮತ್ಪುತ್ರನಾದ ।
ಆ ವಿಮಳನಂಬಿ ಪೋಗಿರ್ದಪಂ ನೀನವನೊ
ಳಾವಗಂ ಸಖನಾಗಿ ಮದ್ಭಸಿತಮಹಿಮೆಯಂ
ತೀವು ಧರೆಯೊಳಗೆಂದು ಬೀಳುಕೊಟ್ಟಂ ಭರ್ಗ ನಮಿತಸುಪ್ರಮಥವರ್ಗಂ || ೫೦ ||

*ತಾವರೆಯ ಪಗೆವನೆಲರ್ಗೆಳೆಯ ನಾಗರದಾಳ (?)
ರಾವಗಂ ನಿಟ್ಟಿಸುವ ದಿಟ್ಟಿ ಪೊದೆವಟ್ಟ ಪ
ಟ್ಟಾವಳಿಗಳಾನೆದೊವಲೆಸೆವ ಪುಲಿಸಮ್ಮವಾ ನೆಲವೊಱೆಯನೆರ್ದೆಯೊಳಿಟ್ಟ ।
ಲೇವಳಂ ರಕ್ಕಸರ ಪಂದಲೆಯ ಮಾಲೆಯತಿ
ತೀವಿರ್ದ ಮುತ್ತಿನೊಳ್ಪಾರವಾಗಲ್ಕೆ ಮಾ
ದೇವನೆಱಗುವನೆಡಗಾರ್ವನೊಪ್ಪಿದನೆನ್ನ ಜೀವಗುರು ಭೋಗಮಲ್ಲ || ೫೧ ||

ಇದು ಸಕಲಭಕ್ತಪದಪದ್ಮಮಧುಕರಪುಣ್ಯ
ಸದನ ಗುಬ್ಬಿಯ ಮಲ್ಲಣಾರ್ಯರ ಕೃಪಾಪಾತ್ರ
ಮುದಿತನವರಸಭಾವ ಲಕ್ಷಣಾಲಂಕಾರ ನಿಪುಣನೆಂದೆನಿಸಿ ಮೆಱೆವ ।
ಚದುರ ಚೇರಮನೊರೆದ ಚೇರಮ ಚರಿತ್ರಮಂ
ಪದಪಿಂದ ಬರದೋದಿ ಕೇಳಿ ವಿಸ್ತರಿಸುವ
ರ್ಗೊದಗಿಪ್ಪುದಾಯುರಾರೋಗ್ಯಸಂಪದ ಸರ್ವಸಿದ್ಧಿ ಸತ್ಯಂ ತಧ್ಯವು || ೫೨ ||

* ‘ಗ’ ಪ್ರತಿಯಲ್ಲಿ ಈ ಪದ್ಯವಿಲ್ಲ.



# ಎರಡನೆಯ ಸಂಧಿ

**ಸೂಚನೆ :**

ದೇಶಾದಿಪುರವರ್ಣನಂಗಳಿಂ ಕೇರಳಮ
ಹೀಶನೆನಿಪಮರನಾಥಂ ವನಿತೆ ಸಹಿತ ಸ
ರ್ವೇಶನಂ ಭಜಿಸಿ ತನಗಣುಗನಪ್ಪ ವರಂಬಡೆದ ಕಥನವನೊರೆವೆನು ॥

ಪೇಳೆ ವೃದ್ಧರ ನುಡಿಯ ಕೇಳ್ವನಲ್ಲಂ ನಿನಗೆ
ಗಾಳಿಗೂಳರ ಮಾತು ಸೊಗಸು ಮೊಗದೊಳು ಕಿಚ್ಚ
ತಾಳಿಕೊಂಡಿರ್ಪೆಯಾ ಸಾಂಖ್ಯನೆಂಬನ ಕೆಣಕಿ ಕಲ್ಲಿಂದಲಿಡಿಸಿಕೊಂಡೈ ।
ಸೂಳೆಯೆಂಜಲನುಂಡು ಹಾವಿನ ಹಗೆಯು ಪೊತ್ತು
ಬಾಳುವವನೈ ನೀನು ನಿನಗೆ [1] ಹೆಂ[1]ಗೊಟ್ಟ ಭೂ
ಪಾಲ ಗಿರಿರಾಜನೇಂ ಕಲ್ಲೆರ್ದೆಯನೋ ಇದಂ ಹೇಳೆನಗೆ ಭೋಗಮಲ್ಲ ॥ ೧ ॥

ಈ ರಮ್ಯವಾಗಿಯಾ ಬರ್ದಿನಿಂದಂ ಪೇಳ್ವ
ಚೇರಮ ಚರಿತ್ರದೊಳು ಮುಂದೆ ಸತ್ಕಥೆಯನವ
ಧಾರಿಪುದು ಸಜ್ಜನರು ಲಕ್ಷಣಾನ್ವಿತರು ಸತ್ಪ್ರೌಢರೆಂತೆನೆ ಪೇಳ್ವೆನು ।
ಮೇರುವಿಂಗಂ ದಕ್ಷಿಣಾಭಿಮುಖದಲ್ಲಿ ನಿಷ
ಧೋರುಗಿರಿ ಹೇಮಶಿಖರಂ ಹಿಮಾಚಲದಿತ್ತ
ಪಾರಿನಿಧಿಯೊಳಗಾದ ಭರತಖಂಡಂ ಧರ್ಮದಂತಿರ್ಪುದೆಂತೆಂದೊಡೆ ॥ ೨ ॥

ಬಾಗಿ ಬಳಸಿದ ಲವಣವಾರಿಧಿಯೆ ಬಿಲ್ಲದಕೆ
ರಾಗದಿಂದೇಱಿಸಿದ ಹೆದೆ ಪೂರ್ವಪಶ್ಚಿಮ
ಕ್ಕಾಗಿ ಕೂಡಿರ್ದ ಕುಳಿರ್ವೆಟ್ಟು ಬಳಿಕಂಬಾವುದೆನಲಲ್ಲಿ ಪುಟ್ಟಿ ಪರಿದು ।
ಸಾಗರವನೊಂದಿ ಪಾವನೆಯಾಗಿ ರಾಜಿಸುವ
ಭಾಗೀರಥೀ ಗಂಗೆ ಪಿಡಿದ ಬಿಲ್ಲಾಳು! ಭೂ
ಭಾಗದಾಧಾರವೆನಿಸುವ ಮೇರುವೆನೆ ಭರತಖಂಡವೊಪ್ಪುತ್ತಿರ್ದುದು ॥ ೩ ॥

ಮಿಱುಪ ಮಣಿದಲೆವಾವುಗಳ ನಡುವಣೆಲರುಣಿಗ
ಳೆಱೆಯ ಬಾಸುಗಿಯಂತೆ ಮಿಾನ್ಗಳೆಡೆಯೊಳಗಮರ್ದು
ಗಱೆವ ಚಂದಿರನ ಪಾಂಗಿಂ ಮರಂಗಳ ಮಧ್ಯದಲ್ಲಿರ್ಪ ಸಗ್ಗವರದ ।
ತೆಱದಿಂದೆ ಸಕಲ ಗುಣದೊಳಗೀವ ಗುಣದಂತೆ
ನೆಱೆ ಪಲವುದೇಶಂಗಳೆಲ್ಲಕ್ಕೆ ತಲೆರನ್ನ
ವುಱುವುದುತ್ತಮದ ಕೇರಳನಾಡು ದುರ್ಗುಣಂಗಳ ಕೇಡು ಸೌಖ್ಯದೀಡು ॥ ೪ ॥

---

[1] ಹೊ (ಕ).

ಆ ದೇಶವತಿಶಯದೆ ಸೊಗಸ ಬೀಱುವ ಪಾಶ
ವಾದೇಶವಧಿಕ ಸದ್ಧರ್ಮದುನ್ನತ ಕೋಶ
ವಾದೇಶವೆಯ್ದೆ ಭೂವನಿತೆಯ ಶಿರಃಕೇಶವಾದೇಶ ಸುಪ್ರಕಾಶ |
ಆದೇಶ ವಿಮಲಶಾಂತಿಗೆ ತಾರಕಾಧೀಶ
ವಾದೇಶವಾನಂದರಸಮಯದ ಪರಿವೇಷ
ವಾದೇಶವೀಕ್ಷಿ[1]ಸಿದ[1] ಮನುಜರಘನಾಶವೆನಲೆಸೆವುದೇಂ ವರ್ಣಿಸುವೆನು ||೫||

ವೃತಿಮಾತ್ರದಾ ಗ್ರಾಮನಿಕರದಿಂ ಗೋಪುರಾ
ನ್ವಿತನಗರದಿಂ ಬಳಸಿ ನದಿಯಿರ್ಪ ಶಾಲಪರಿ
ವೃತದದ್ರಿ ಖೇಡಂಗಳಿಂದೆ ಮಣಿಪುಟ್ಟದೆಡೆಯುಳ್ಳ ಖರ್ವಡನಿಚಯದಿಂ |
ಶತಪತ್ತನಂಗಳಂ ಪಾಲಿಸುವ ಕೀರ್ತಿಯೂ
ರ್ಜಿತರತ್ನಯೋನಿಗಳಿನಂಬುನಿಧಿಯುಗ್ರಸಂ
ಸ್ಥಿತಮಪ್ಪ ತದ್ರೋಣವರ್ಗದಿಂ ಕೇರಳಮಹಾದೇಶವೆನೆದಿರ್ಪುದು ||೬||

ಕ್ರೂರತ್ವವೆಂಬುದಂಗನೆಯರ ಕುಚಂಗಳೊಳ
ಗಾರಯ್ಯೆ ಬದ್ಧತ್ವವೆಂಬುದು ರಸಂಗಳೊಳು
ಹೈರಣ್ಯದಂಡವೆಂಬುದು ವೇತ್ರಹಸ್ತರೊಳಗಾ ಪರಾರ್ಥಾಪೇಕ್ಷೆಯು |
ಚಾರುಕವಿಜನದೊಳಂ ಭಂಗವಾಕಾಶದೊಳು
ಸಾರ[2]ಸತ್ಪಾತ್ರ[2] ತಾಡನವಾ ಕುಲಾಲರೊ
ಯ್ಯಾರದೊಳು ಕ್ಷುದ್ರತ್ವವಾ ನಟನಕಾಂತೆಯರೊಳಲ್ಲದಾ ನಾಡೊಳಿಲ್ಲ ||೭||

ಹೊಡೆ ಕಟ್ಟು ತೂಗು ಗುದ್ದಿಱಿ ಸೀಳು ಹೋಳೆಂಬ
ನುಡಿ ಬಾಳೆಯಲ್ಲಿಯೊಡೆಗೆಱೆಯಲ್ಲಿ [3]ತೊಲೆ[3]ಯಲ್ಲಿ
ಬಿಡೆ ನರಿಯ ಬಿಲದಲ್ಲಿ ಕೈಯ ಹಕ್ಕಿಗಳಲ್ಲಿ ತಂತುವಾಯರ ನೂಲೊಳು |
ಅಡಕೆಗಳ ಭಾಗದ ಪರಸ್ತ್ರೀಗಮನವೆಂಬು
ದೊಡನೆ ರಾಜಿಸುವ ಪಾವುಗಳ ಸಂದೋಹದೊ
ಳ್ಕಡೆಯೆಂಬ ನುಡಿ ಮೊಸರೊಳಾ ರಂಗವಲ್ಲಿಯೊಳಗಲ್ಲದಂತಾ ನಾಡೊಳೆಂದುಮಿಲ್ಲ ||೮||

ಹಿರಿಯೂರ್ಗಳಲ್ಲಿ ಗುರುಹಿರಿಯರಿಂ ಪತ್ತನದ
ಪೊರೆಯಲ್ಲಿ ಸಂಪತ್ತನುಳ್ಳ ಜನದಿಂದೆ ಸೌಂ
ದರದಗ್ರಹಾರದೊಳಗಗ್ರಹಾರಂದಳೆದ ಕುಚಕುಂಭದಂಗನೆಯರಿಂ |
ಪುರಪುರಂಗಳೊಳು ಗೋಪುರದ ಸಿಂಗರಗಳಿ
ತ್ತರದ ಕೆಲವಳ್ಳಿಯಬಲೆಯರ್ಗಳೆಳೆವಳ್ಳಿಯಾ
ಸರೆಯೆನಲ್ಕಾ ನಾಡು ಮೆಱೆದತ್ತು ಸೌಖ್ಯತರವೆತ್ತು ಬಹುಸುಖದ ಗೊತ್ತು ||೯||

---

[1] ಸಿರ್ದ (ಕ). [2] ಸತ್ಪತ್ರ (ಕ). [3] ತೊಱೆ.

ಆಯತದ ಬುಧನಗರಿಯಿಂದೆ ಹರಿಹರಭಟ್ಟ
ನೋಯರದಿ ಕಾಶಿಗೆಯ್ದಲ್ಭುತವವನಂತೆ
ಯಾಯುಬಲೆಯಂ ರಮಿಸುತಿರೆ ಬಂದೊಡಿರ್ವರೊಂದೇ [1]ತೆಱದೊಳಿರೆ[1] ಗಿಂಡಿಯ |
ಬಾಯೊಳಗೆ ಹೊಕ್ಕು ಜೂಳಿಯೊಳು ಹೊರಡುವೆನೆಂಬ
ಮಾಯಾವಿಯಂ ಕಳೆದು ನಿಜದೆ ಬೆಜವಾಡದೊ[2]ಳ್[2]
ನ್ಯಾಯಮಂ ಪೇಳ್ದ ಮಧ್ಯಸ್ಥರಂದದ ಜನದ ಪೇರೆಗಳಿನೊಪ್ಪಿರ್ದುದು ॥ ೧೦ ॥

ನೆಲದೊಳೆಲ್ಲೆಲ್ಲಿಯುಂ ಮಣಿಗಳಂ ತಳೆದಿರ್ದ
ಕುಲನಗಂ ನಗದ ತಪ್ಪಲೊಳೊಗೆದು ರಾಜಿಸುವ
ಫಲವೃಕ್ಷದಡವಿಯಂತಡವಿಯೊಳ್ನಾಡೆ ಜನಿಸಿರ್ದ ಪೇರಾನೆಯಾನೆ
ದಲೆಮುತ್ತುದೊಡವಾಂತ ಚೆಲ್ವಬೇಡಿತಿಯರಾ
ಚೆಲುವೆಯರ ಬಟ್ಟಮೊಲೆಗಳೊಳಿರ್ದು ಬಿನದಿಸುವ
ಕಲಿಗಳೆನಿಪೆಳವೇಡರಿಂದ ಮೆಱೆದಿಪ್ಪುದಂತಾ ಗಿರಿವನಪ್ರಾಂತವು ॥ ೧೧ ॥

ಅಂತಪ್ಪ ಪರ್ವತಂಗಳು ವಾರ್ಧಿರಾಜಂಗೆ
ಪಿಂತೆಮ್ಮ ಮೈನಾಕ ಮುಖ್ಯರಂ ರಕ್ಷಿಸಿದ
ಕಾಂತನ್ಯೈ ಕೇಳೆಮ್ಮ ಮೇಲಿಂದ್ರನಂಬುದಂಗಳ ಕಳುಪಿ ಮುತ್ತಿ ಸುತ್ತ |
ತಾಂ ತೊಡುತ್ತಿಂದ್ರ ಧನುವಿಂದಂಬ ಬಿಟ್ಟನೆನು
ತಂ ತಳ್ತು ಪೊಱೆಗಟ್ಟ ದೂಱಿಟ್ಟು ಕಳುತಿ
ರ್ಪಂತೆ ಗಿರಿಗಿರಿಗಳಿಂದೊಗೆದು ನದಿ ಭೋರ್ಗರೆದು ಸಾಗರಂಗಳ ಬೆರೆದವು ॥ ೧೨ ॥

ಅಮಮ ರಾಜಿಪ ನದಿಗಳಿರ್ಕೆಲದ ಗದ್ದೆಯೊಳ
ಗಮೃತಕಿರಣಂಗಳೆಂದೆಂಬ ಕಳಮೆಯ ಬಿತ್ತ
ಲಮರ್ದುಗಯ್ಯನ ಪಚ್ಚಪಸಿಯ ಹರೆಯದ ಬೆಳಗಿನೊಳ್ಪುಟ್ಟ ಕಳೆಯೇಱುತ |
ನಿಮಿರ್ದು ಗೆಣ್ಣಿಟ್ಟು ಕವಲಿಡುತ ತೆನೆದೋಱಿಯಾ
ಕ್ರಮದಿಂದ ಪಾಲ್ದುಂಬಿ ಕಣಿಶವಾಗಿರ್ಪವಾ
ರಮಣೀಯಮಾದ ಕೇದಾರವಾ ಮಾರಸಹಕಾರ ಜನದಾಧಾರವು ॥ ೧೩ ॥

ರಾಜಿಸುವ ಪಾಲ್ತೊರೆಗಳಿಂದ ಬಂದೆಱಗುವವು
ರಾಜಹಂಸಗಳರರೆ ಪುಷ್ಪಮಂಜರಿಯ ಕೆಂ
ಜಾಜಿಯಲರೆಂದಳಿಗಳೆಯ್ದಿ ಝೇಂಕರಿಸಿ ಕವಿವವು ಕೂರ್ತು ಕೆಂಬತ್ತಿಯ |
ಓಜೆಗಳೆ ಮಾವಿನಂಕುರವೆಂದು ಕೋಕಿಳಸ
ಮಾಜಂಗಳೆಳಸುವವು ಮಿಕ್ಕ ಕಳಮೆಯ ತೆನೆಗೆ
ಭೂಜಂಗಳಿಂದ ಭೋರ್ಗರೆದಿಳಿವವಾ ತೊಂಡುಗೆಡವುತಿರೆ ಗಿಳಿಯ ಹಿಂಡು ॥ ೧೪ ॥

---

[1] ತೇಜನೋಳಿರೆ ? (ಕ). [2] ಡು (ಕ).

ಬಂಡುಣಿಗಳಾವಗಂ ತೊಂಡುಗೆಡೆವರಗಿಳಿಗ
ಳಂಡಲೆದು ತಳಿರ್ಗಳಂ ತುಂಡಿಸಿ ಕುಕಿಲ್ಗೆಯ್ವ
ಗಂಡುಗೋಗಿಲೆಗಳಂಗಚ್ಛವಿಗಳೊಳ್ನುಡಿಗಳೆಸವ ದನಿಗಳ್ ಸ್ನೇಹವ ।
ಕೊಂಡು ಬಳದಳಕಕೆಮ್ಮಯ ಸತ್ಯವಚನಕ್ಕೆ
ಖಂಡಿತದ ನುಣ್ಚರಕ್ಕೆಣೆಯಲ್ತುವೆನುತೆಯಲ
ಗೊಂಡಿಡುವರಾ ನೆಲ್ಲಗದ್ದೆಯಂ ತಿನಬಂದ ಪಕ್ಕಿಯಂ ಪಾಮರಿಯರು ॥ ೧೫ ॥*

ಎಳಸಿ ಪಥಿಕರ ದಿಟ್ಟಿಯಾ ಪಾಮರೀಜನದ
ಸುಳಿಗುರುಳೊಳಂ ಸುಳಿದು ಮೊಗದಾವರೆಯ ಪೊಕ್ಕು
ಬಳಸಿ ಮೊಲೆವೆಟ್ಟೇಱಿ ನಿಮ್ನನಾಭಿಯೊಳಿಳಿದು ಪೊಱಮಾಱನಡಿ ನೋಡಿ ।
ಬಳಿಕ ನುಣ್ದೊಡೆಗೆಯ್ದಿ ಜಾಱಿ ಬಿದ್ದಡಿಯಲ್ಲಿ
ಬಳಲಿ ಬಾಯಾರಿ ಕಂಗೆಟ್ಟವರ ಸೇದೆಯಂ
ಕಳೆಯಬೇಕೆಂದು ಸಮೆದಿರ್ದವಂತಾ ಪ್ರಪಾನಿಳಯವಡರಿಚಿದ ಚಳಯ ॥ ೧೬ ॥

ಪೊಳೆವ ತನುಘಟದೊಳಗೆ ಕಾಂತಿರಸಮಂ ತುಂಬಿ
ತಳಪ [1][ಕ][1]ಣ್ಮೊಗ ಮೂಗು ಸೆಳ್ಳುಗುರ್ಗಳೆನಿಸುವು
ತ್ಪಲಕಂಜ ಚಂಪಕಾಕೇತಕಿ ಪರಿಮಳಂಗಳ ಪೊರೆವುತಾ ಪಥಿಕರ ।
ಬಳಲ್ದಚ್ಚಿಯಱಕೆಯಂ ತೀರ್ಚುವಂದದೊಳು ಪೆ
ರ್ಗುಳಿರ್ವಡಕೆಯಲ್ಲಿ ಪನ್ನೀರ್ದೀವಿಯಾ ವರಿಯೊ
ಳಳವಟ್ಟು ಕಂಪೂಡಿ ತಂದು ಪಾಂಥರ್ಗೆಱೆವ ಸಱಿಮಿಂಡಿಯರ್ಮೆಱೆದರು ॥ ೧೭ ॥

ಸಱಿಮಿಂಡಿ ಪಿಡದಿರ್ದ ಪಳುಕಿನ ಕಥಾರವಾ
ನೆಱೆವೆಱೆಯ ಪೋಲ್ತ ಮುಖಕಾಂತಿಗೊಸರಿರ್ದೊಡೆದ
ತೆಱದೊಳಿರಲೊಳಗನೀಕ್ಷಿಸಲಪಾಂಗದ ರೋಚಿ ತತ್ಕಳಶರಂಧ್ರದಲ್ಲಿ ।
ಎಱೆವ ನೀರ್ಧಾರೆಯಂತಿರೆ ಪಥಿಕನೆಳ್ತಂದು
ಬಱಿದೆ ಬಯಲಿಗೆ ಬಾಯಬಿಡುತಿರಲ್ಕಿಟ್ಟಸು
ತ್ತಱಿದೊರ್ವ ಸುಪ್ರೌಢೆ [2]ನಕ್ಕ[2]ಳಿರ್ವರ ಚಾರುಮುಗ್ಧತೆಗೆ ಜಾಣ್ಮೆಯಿಂದೆ ॥ ೧೮ ॥

ಈಪರಿಯೊಳೊಪ್ಪುತಿಹ ದೇಶಕೆ ಶಿರೋರತ್ನ
ವಾ ಪಿರಿಯ ರಾಜಧಾನಿಗೆ ಕುಡುಗುಲೂರು ಬಳಿ
ಕೋಪ ತಿರುವಂಜಕಳಪುರ ಮಹೋದಯ ಪಟ್ಟಣಂಗಳೆನೆ ಪೆಸರೆಸೆವುದು ।
ಆ ಪೊಳಲನೊಲಿದು ಬಳಸಿರ್ದುಪವನಂ ಪುಷ್ಪ
ಚಾಪಂಗೆ ಸಂತೋಷವೆನಿಸಿ ರಾಜಿಸುವ ನಿ
ಷ್ಪಾಪಲೀಲಾಖ್ಯಾತಿ ಘನವಿಭವಸಂಭೂತಿ ಸಾತಿಶಯದಿಂದಿರ್ಪುದು ॥ ೧೯ ॥

---

* 'ಗ' ಪ್ರತಿಯಲ್ಲಿ ಈ ಪದ್ಯವಾದ ಮೇಲೆ ೧೪ನೆಯ ಪದ್ಯವಿದೆ. [1] ಗ (ಕಗ) [2] ಯರ್ಕ (ಕ).

ಕೇತಕಿಯ ಗಱಿಗಳೇ ಕಕ್ಕುದಱ ತೆನೆಯೆ ತೆನೆ
ಸಾತಿಶಯವದಱ ಪಚ್ಚೆಯೆ ಕೋಂಟೆ ಪೂಗವೇ
ಕೇತನಂಗಳು ಗುಂಡ ಹೊತ್ತ।ಡೆಂಕಣಿ ತೆಂಗು ಕರಿಯ ಕಬ್ಬುಗಳು ಸಬಳ ।
ಪೂತ ಮರಮರಗಳುಪ್ಪರಿಗೆಗಳು ಮಾಧುರ್ಯ
ಚೂತವೃಕ್ಷವೆ ರಾಜಮಂದಿರವೆನಲ್ಕೀನ
ಕೇತನ ಮಹೇಶ್ವರನ ರಾಜಧಾನಿಯ ಮಾಳ್ಕೆಯಿಂದುಪವನಂ ಮೆಱೆದುದು ॥ ೨೦ ॥

ಉಲಿವ ಪಕ್ಕಿಯೆ ಪಹರಿಯಾಳು ಗಿಳಿ ಪಡಿಯಱರು
ನಲಿದು ಮಧುಕರನೆ ಸಿದ್ಧಾಯಕ್ಕೆ ತೆಱಕಾಱ
ನೊಲಿದ ಸಂಪಗೆಗಳೇ ಚಿನ್ನ ಭಂಡಾರವಾ ಸುರಹೊನ್ನೆ ಹೊನ್ನಗೇಹಂ ।
ಜಲಜರಂಭಾ ಚೂತವೆಯ್ದೆ ಬೊಕ್ಕಸದ ಮನೆ
ಯಲಗುಗಳೆ ಜೇನಸಾಲೆಯೆ ಗಿಡುಗಳಾ ರನ್ನ
ನಿಲಯವಾ ನೇಱಲೆನೆ ಕಾಮನ ಮಹಾರಾಜಧಾನಿಯೆನೆ ವನವೆಸೆವುದು ॥ ೨೧ ॥

ನೀರಳ್ಕೆಗೆಡೆಯಾಡುವಾನೆಗಳ ನಿಗಳ ಗಂ
ಭೀರರವದಿಂ ರತ್ನಭೂಷಸೌಂದರಿಯವೆ
ತ್ತಾ ರಾಜಪುತ್ರರಿಂ ಸುಪ್ರೌಢವಕ್ತ್ರ ತಾಂಬೂಲ ಹಿಮ ಸೌರಭ್ಯದಿಂ ।
ವಾರನಾರಿಯರಿಟ್ಟಣದ ನೋಂಕಿನಿಂದೆ ಬಾ
ಯಾರೆ ಕೀರ್ತಿಸುವ ನಿಜವಾಕ್ಯಾಮೃತಂಗಳಿಂ
ಚಾರುಬಹುವಿಧಸುಖವನಿತ್ತು ರಾಜಿಸುತಿರ್ದುದರರೆ ನಗರೋಪಕಂಠಂ ॥ ೨೨ ॥

ಮಿಗೆ ಫಣೀಶ್ವರನ ಸುತೆ ಬಳಸಿದಾಳಿಯರೊಳಂ
ಬಗಿದಿಳೆಯ ಮೇಲಕ್ಕೆ ಪರಿವೃತ್ತಿಯಿಂದೇಳ
ಲಗಳಾದುದವಳ ಪಿಂದೆಯ್ತಂದ ಪಾತಾಳಜಲವೆಂಬ ಮಾಳ್ಕೆಯಿಂದ ।
ನೆಗಳೆ [1]ನೀರೆಸೆವುತ್ತಿವಳ್[1] ಸ್ವಯಂವರಕೆಂದು
ಸೊಗಸುವೀ ಪುರವೆಂಬ ನಾಗರಿಕನ ಕೊರಲೊ
ಳಗೆ ಪಾಯ್ಕಿದುತ್ತಮದ ರಸರತ್ನಮಾಲೆಯೆನೆ ಮಣಿಗೋಂಟೆ ರಾಜಿಸಿದುದು ॥ ೨೩ ॥

ಶ್ರೀಮಹಾಜಮದಗ್ನಿಯಣುಗನೆನಿಸುವ ಪರಶು
ರಾಮನಾ ರಾಘವಂ ತೊಟ್ಟ ಬಾಣದದೊಂದು
ಸಾಮರ್ಥ್ಯಕಳುಕಿ ಬಂದಖಿಳಭೂಮಿಯನಿತ್ತು ವಿಪ್ರರಿಗೆ ತಾನಿರಲ್ಕೆ ।
ಸೀಮೆಯಂ ಬೇಡೆ ಧನುವಿನ ಹೆದೆಯನಲ್ಲಿ ಸು
ತ್ರಾಮನೊಱಲೆಯ ರೂಪಿನಿಂ ಕಡಿಯಲದಱೊಳಿ
ಜ್ಯಾಮಾತ್ರಕಳಱ ತೆಗದಬ್ಧಿಯಂ ಪಳಿವಂತೆ ಪುರದಗಳ್ ಕಂಗೆಸೆದುದು ॥ ೨೪ ॥

---

[1] ನಿರೆಸಯ್ತುವಳ್ (ಕ).

ಮುಳಿವ ರಿಪುನೃಪರೆನಿಸುವೆರಳೆಗಳ ಮುಱಿದಿಡುವ
ಹುಲಿಮುಖದಿನಿದಿರಾದ ವೈರಿರಾಯರನು ಮುಂ
ದಲೆವಿಡಿದು ಬಾಗಿಸುವ ಬಾಗಿಲ್ಗಳಿಂ ವಜ್ರಮಯಕವಾಟಂಗಳಿಂದ ।
ನಲಿದು ಪುರ ಜಯಲಕ್ಷ್ಮಿಯುಗ್ರಭುಜಹಸ್ತವರಿ
ಬಲವನಱಿಯಟ್ಟಲೆತ್ತಿದ ತೆಱದ ಕೊತ್ತಳದೊ
ಳಲರ್ವ ಡೆಂಕಣಿಗಳಿಂ ಮೆಱೆದುದಾ ಪೊಳಲು ರಿಪುಜೀವನಂಗಳನು ಕೊಳಲು ॥ ೨೫ ॥

ಆಳುವರಿ ಪಗೆಯೆರ್ದೆಯ ಸೀಳುವರಿ ಭಾವಿಸೆ ಭ
ಡಾಳಿಸಿರ್ದಾ ಮಕರಬಿಬ್ಬಿಗಳು ಗಬ್ಬಿಗಳು
ಹೇಳಲೇನಟ್ಟಣೆಯದಿದಿರಾದವರ ತಲೆಯನರಿದು ತೂಗುವ ಕಟ್ಟಣೆ ।
ಗಾಳಿಗಲುಗುತ್ತಿಹ ಪತಾಕೆ ವೀರರ ಜೋಕೆ
ಮೇಳಿಸಿದ ದಸಿ ರಿಪುವ ಸುಡುವ ಬಿಸಿ ಬಿರಿದು[1]ಯಿಾ[1]
ರೇಳುಲೋಕಕ್ಕರಿದು ಭಾಪೆನಲು ಮೆಱೆದುದಾ ಪುರಿ ವೈರಿಗಜಕೇಸರಿ ॥ ೨೬ ॥

ತರವಿಡಿದ ಪರದರ್ಕಳಾ ರನ್ನ ಮುತ್ತುಗಳ
ಪರಿಪರಿಯ ಪಟ್ಟವಸ್ತ್ರಂಗಳ ಸುಗಂಧಂಗ
ಳುರುತರದ ಕರ್ಪೂರ ಕಸ್ತೂರಿ ಮುಖ್ಯವಸ್ತುಗಳ ವಿಕ್ರಯಿಸುತಿರ್ಪ ।
ಪಿರಿಯಂಗಡಿಗಳಿಂದ ಸುವ್ಯೌಢರಹ ಚಿನ್ನ
ವರದರಿಂ ನೆತ್ತ ಪಗಡೆಗಳ ಚದುರಂಗದುರು
ತರದ ಜೂಜುಂಗಾಱರೆಸೆವ ಜಾಣಿಂ ಮೆಱೆದುದಾ ರಾಜವೀಧಿಯಲ್ಲಿ ॥ ೨೭ ॥

ಆ ರಾಮಣೀಯಕದ ಪಟ್ಟಣದ ನಡುವಿರ್ಪ
ಚಾರುದೇಗುಲದ ಶಿವಲಿಂಗದೇವರ ಪಣೆಯ
ಮಾರುತಸಖಾಂಬಕಪ್ರಭೆಯದೂರ್ಧ್ವಕ್ಕಡರಿದಂತೆ ರತ್ನದ ಶಿಖರದಿಂ ।
ಸಾರ ಚಂದ್ರಾಗ್ನಿಭಾಸ್ಕರನೇತ್ರ ಕಿರಣಂಗ
ಳೋರಂತೆ ಮುಂಬರಿದ ಮಾಳ್ಕೆಯಿಂದಾ ಸೋಮ
ಸೂರವೀಧಿಗಳೊಪ್ಪುತಿರ್ದವಾ ಮೌಕ್ತಿಕದ ಪೊಂಬೆಳಗಿನೇಳ್ಗೆಯಿಂದ ॥ ೨೮ ॥

ಸುಯ್ಗೆಱಪ ತುಂಬಿಯ ರವಂಗಾವರಂ ಮಿಸುನಿ
ಗೈಯ್ಗಂಕಣದ ಝಣತ್ಕೃತಿ ವಾದ್ಯವಲ್ಲಿ ಕೆಳ
ಮೆಯ್ಗಳಿದ ಮೇಲುದು ಸರಿದ ತೆರೆ ಹಾರ ಕಿರಣಂಗಳೇ ಪುಷ್ಪಾಂಜಲಿ ।
ಅಯ್ಗೋಲನೇ ನಟ್ಟುವಂ ಬಿಟ್ಟ ಕಣ್ದೆಱೆದ
ಬಾಯ್ಗಳಿಂದಿರ್ಪವರೆ ಸಭೆ ಕದಕದಿಪ ಮೊಲೆ
ಕಯ್ಗೈದ ಜವಳಿನಚ್ಚಣಿಯರೆನೆ ಗಂಧಗಟ್ಟಿಯ ಮುಗುಳ್ಚಿದಳೊರ್ವಳು ॥ ೨೯ ॥

[1] ಯಾ (ಕ)

ಸ್ಥಾಣು ಪದಿನಾಲ್ಕುಲೋಕಕ್ಕಧಿಕನಾದೊಡೇಂ
ಏಣಾಕ್ಷಿಯುಂ ಸೋಂಕಲರಿಮೆಯ್ಯನಾದುದಂ
ಕಾಣಿಸುವ ಮಾಳ್ಕೆಯಿಂ ಸಿರಿಗಂಧದುನ್ನತಿಯ ಸೌರಭ್ಯಮಪ್ಪ ಜಸಮಂ ।
ಮೇಣಖಿಳ ದಿಕ್ಕಿನೊಳು ಪರಕಲಿಸುವಂದದಿಂ
ಸಾಣೆಕಲ್ಲೊಳು ಕುಂಕುಮಾದಿ ಕಸ್ತೂರಿಗಳ
ವೀಣೆಗಳನೊಡೆದಿಕ್ಕಿ ನಲ್ಪಿನಿಂ ಗಂಧಗಟ್ಟಿಯ ಮುಗುಳ್ಚಿದಳೊರ್ವಳು ॥ ೩೦ ॥

ಗಱಿವೂವಿನೆಸಳೆ ಹೊತ್ತಗೆಯುದಱ ಸೊಗಸು ರತಿ
ಯೆಱೆಯನಾಗಮುವಮಳ ಪರಿಮಳಕ್ಕೆಱಗುವಳಿ
ಯುಱುವ ವಾಚಕನಲ್ಲಿಗೆಯ್ತಂದ ಸದ್ವಿಟನೆ ಕೇಳಿಕೊಳಬಂದ ವಾದಿ ।
ನೆಱೆ ಕುಸುಮಮಾಲೆವಿಡಿದಿಹ ಸತಿ ಯಥಾರ್ಥಮಂ
ಮಱೆಸದುಸುರುವ, ವಾಗ್ಮಿಯೆನೆ ವಿರಾಜಿಸುವುದಾ
ನಱುಗಂಪ ಕಱೆವ ಪೂವಿನ ಪಸರವಧಿಕತರಮಪ್ಪ ಮೋಹನದ ವಿಸರ ॥ ೩೧ ॥

ನಲ್ಲಳೊರ್ವಳು ಜಾದಿಯಲರ ಸರವಿಡಿವುತಧಿ
ಕೋಲ್ಲಾಸದಿಂದೆ ನಸುಬಾಗಿರಲ್ಕಾಣುತ್ತ
ಬಲ್ಲಹಂ ಬೆಲೆಗೇಳ್ವ ನೆವದೊಳಾ ನಡು ಸಣ್ಣನೆಂದು ಪಿಡಿದಾಗ ನೋಡಿ ।
ಫುಲ್ಲಶರನಿಂದಿಕ್ಕೆಲದೊಳಿರ್ದ ಮುಗ್ಧೆಯರ್
ಜಲ್ಲೆನುತ ಕೆಟ್ಟೋಡೆ ವಿರಹವಾಂತರ್ಬಳಿ
ಕ್ಕಲ್ಲಿಯಾ ಪುಷ್ಪಮಂ ವಿಕ್ರಯಿಪ ವನಿತೆಯರ ಬಣ್ಣಿಸುವನಾರಿಳೆಯೊಳು ॥ ೩೨ ॥

ಇಂತಪ್ಪ ಹರ್ಮ್ಯಕೋಟಿಗಳ ಮಧ್ಯದೊಳು ಭೂ
ಕಾಂತನೆನಿಪಮರನಾಥನ ವಿಳಸದರಮನೆಯ
ನಂತ ನವರತ್ನಕಿರಣದ ಶೀಕರಂಗಳಿಂ ಶಸ್ತ್ರಗೃಹ ಕೋಶ ಗೇಹಂ ।
ಸಂತತಾಭ್ಯಾಸೋದವಸಿತಂ ವಿಚಾರದೇ
ಕಾಂತಸದ್ಮಂ ಪಚನಕುಟಿ ಶಯನಭೋಜನ ನಿ
ಶಾಂತಂಗಳೀಶಪೂಜಾವಾಸಮುಖ್ಯ ಭವನಂಗಳಿಂ ಮೆಱೆದಿರ್ದುದು ॥ ೩೩ ॥

ಉರ್ವಶಿಯ ನಡುವುಳ್ಳ ಮಂಜುಘೋಷೆಯರೆನಿಪ
ನಿರ್ವಚದ ನೀಲಿಮ ಸುಕೇಶಿಯುರು ರಾಜಿಸುವ
ಸರ್ವವನಿತೆಯರಿಗಗ್ಗಳಮಪ್ಪ ರಂಭಾಮಳೋರುಗಳ ಸತಿಯರಿಂದ ।
ಪರ್ವಿ ಪರಕಲಿಪ ವಾಕ್ಯಾಮೃತದಿನೀವೊಡೆ ಸು
ರೋರ್ವೀಜವೆನೆ ರಾಜತಾಭಾಂಡಿಕಂಪುಗದ
ಪೂರ್ವದುಣಿಸಱತನಲ್ಲದ ಲಿಂಗಸಹಭೋಗಿಯಮರನಾಥಂ ಮೆಱೆದನು ॥ ೩೪ ॥

ಹರಿಯ ಮೇಲಿದೆಹಾಱು ಬಿಡದಿರ್ದು ಬಳಿಕ ಪುರ
ಹರನ ಕೈಸಾರಲುರಗಂ ಕೊರಲ ಸುತ್ತಿತ
ಲ್ಲಿರದೆ ಸುರಪತಿಯ ಗೇಹಂಬೊಗಲು ಮುನಿಶಾಪವಡಸಿ ನೀರೊಳಗೆ ಬಿರ್ದಂ ।
ವರಲೋಭಿ ಭೂಮಿಪರ ಮನೆಯನಱಿಯದೆ ಹೊಕ್ಕು
ಸಿರಿದಪ್ಪ ಬಂಧನಕ್ಕೊಳಗಾದೆನೆಂದು ಬಂ
ದರರೆ ಸಿರಿ ಬುಧರಿಗೀವಮರನಾಥನ ಹಸ್ತಸರಸಿಜದೊಳೊಲಿದಿರ್ಪಳು ॥ ೩೫ ॥*

ಭೂರಮಣನಾಹವದ ದಾನಮಂಟಪದೆಡೆಯೊ
ಳಾರಯ್ಯೆ ಸುರಸತಿಯರಧರ ದಿವ್ಯಾಮೃತದ
ಚಾರುಸತ್ರದ ಮಧುರಮೃಷ್ಟಾನ್ನಮಂ ಕೊರ್ತು ಹಾರುವರು ಹರಿದು ಬಂದು ।
ಧಾರಾರ್ಥರಾಗಿ ಕೇಳಲ್ಕೆ ತಾಂ ಪಿಡಿದಿರ್ದ
ಕೂರಲಗಿನೆಸೆವ ಬಲ್ಲೆಹದ ಮೊನೆಯುಂಡಿಗೆಯ
ನೋರಂತೆ ತದ್ವಿಜರಿಗಿತ್ತಮರನಾಥನತಿವೀರವಿತರಣದೊಳಿರ್ಪಂ ॥ ೩೬ ॥

ಆ ರಾಯನರಸಿ ಗುಣವತಿ ಪಚ್ಚಪಸಿವರೆಯ
ದೋರಣದಿನಾ ರತಿಯ ವಿರಹಾನಲನ ಕಡೆಗೆ
ಸಾರದಿಪ್ಪುದಱಿಂದರುಂಧತಿಯ ಲೋಕೇಶನಬಲೆ ತಾನಹುದಱಿಂದ ।
ಭಾರತಿಯ ಪುರುಷೋತ್ತಮಾವನಿಪಗೊಲಿಯುಲಾ
ಕ್ಷೀರಕನ್ಯಾಸತಿಯ ರೂಪಿಂ ಪತಿವ್ರತಾ
ಚಾರದಿಂ ಪ್ರೌಢಿಯಿಂ ಸಿರಿಯಿಂದೆ ಗೆಲಿದು ಮೆಱೆದಿರ್ಪಳೆನಲೇವಣ್ಣಿಪೆಂ ॥ ೩೭ ॥

ಆ ರಾಜಗಂ ಸದಾಚಾರದಿಂ ಕೀರ್ತಿವಿ
ಸ್ತಾರದಿಂ ಸತ್ಯಸಂಚಾರದಿಂದಂ ಸಕಲ
ಪೌರಜನ ಭಾಗ್ಯದಾಕಾರದಿಂ ಸ್ವಾಮಿಹಿತಕಾರಣ ಧುರೀಣತ್ವದಿಂ ।
ಶೂರತ್ವದೇಳ್ಗೆಯಿನುದಾರ ಚತುರಂಗಬಲ
ದೋರಣದ ರಕ್ಷಣದೆ ವೀರತ್ವದಿಂದಂ ವಿ
ಚಾರಪರನೆಂಬ ಸಂಸ್ಕಾರಯುತಮಂತ್ರಿ ಗಂಭೀರದಿಂದೆಸೆದಿರ್ಪನು ॥ ೩೮ ॥

ಕೆಱೆಗಳಂ ಚೆಲ್ವಮರ್ದುವೆಱೆಗಳಂ ನಿಕ್ಷೇಪ
ವುಱುವ ಲೋಭಾಕ್ಷೇಪಮಂ ಶಿವಪುರಂಗಳಂ
ನೆಱೆ ಶುಭಕರಂಗಳಂ ಭವನ ಗೇಹಂಗಳಂ ದೋಷಕುಲದಾಹಂಗಳಂ ।
ಮೆಱೆದಿಹ ವನಂಗಳಂ ಪಥಿಕರ್ಗೆ ಕಂಗಳಂ
ತೆಱನಪ್ಪ ಕೃತಿಲಕ್ಷಣೋನ್ನತಿಯ ಸಂತಾನ
ಮುಱೆ ಸಪ್ತಕದೊಳಾಱ ಪಡೆದು ಸುತರಿಲ್ಲದರಸನೊಳೆಂದಳಾ ಗುಣವತಿ ॥ ೩೯ ॥

---

* 'ಗ' ಪ್ರತಿಯಲ್ಲಿ ಈ ಪದ್ಯ ೩೬ನೆಯ ಪದ್ಯವಾದ ಮೇಲೆ ಬಂದಿದೆ.

ಗೋಣ್ಮುರಿದೆಱಂಕೆಯನಲರ್ಚಿ ಚಾದಗೆ ಮಿಸುಪ
ಕಣ್ಮಲರನರೆಮುಚ್ಚುತಂ ಪಯೋಧರದಿಂದ
ಲುಣ್ಮುವಿನಿಮುಂಬನಿಗೆ ಬಾಯ್ದೆಱೆವ ಮಾಳ್ಕೆಯಿಂ ಮಿಱುಗೆ ಮಿಱುನಗೆ ಮೊಗದೊಳು |
ಉಣ್ಮೆ ಬಂದಲುಗಿ ಮಾಗಾಯಿಗಳರಳೆಲೆ ಹೆದೆಯು
ತಣ್ಮಗಲ್ ಮತ್ಪಯೋಧರದ ಪಾಲ್ಗೊಂಬೆಳೆಯು
ಜಾಣ್ಮಗನನಪ್ಪಿ ಮುಂಡಾಡಿ ದಣ್ಣನೆ ದಣಿವ ಭಾಗ್ಯವೆನಗೆಂದಪ್ಪುದೊ || ೪೦ ||

ಮಕ್ಕಳಂ ಮುಂಡಾಡದಿರ್ಪ ಪಣೆ ಮರದ ಪಣೆ
ತಕ್ಕಯಿಸದಾ ತೋಳುಗಳು ಕೊಯ್ದ ಬಾಳುಗಳು
ಚಿಕ್ಕವರ ನಗೆಮೊಗದ ಲೀಲೆಯಂ ನೋಡದಿಹ ಕಣ್ಣು ವಣ್ತೊಡೆದ ಪುಣ್ಣು |
ಮಿಕ್ಕ ಬಾಯೊಳ್ಬಾಯನಿಟ್ಟು ಮುತ್ತಿಡದ ಬಾಯಿ
ಲೆಕ್ಕಿಸಲ್ಬಿಲದ ಬಾಯ್ ಸೋರುವಾಯ್ ತಾನೆನು
ತ್ತಕ್ಕಱಿಂ ಸುತನ ಬಯಸಿದಳು ಗುಣವತಿ ಲಸನ್ಮತಿ ಪತಿಯು ಹರುಷೋನ್ನತಿ || ೪೧ ||

ಎಂದ ಮಾತಂ ಕೇಳ್ದು ನಿನ್ನ ನುಡಿ ಚಿತ್ತಕಾ
ನಂದಮಂ ಮಾಡುತಿರ್ದಪ್ಪುದಿರ್ವರ ನೆನಪ
ದೊಂದಾದುದೆಲೆ ಕಾಂತೆ ಕೇಳು ತಿರುವಂಜಕಳನಾಥ ಘನವೃಷವರೂಢ |
ಹಿಂದಣೆಮ್ಮಯ ಸೂರ್ಯವಂಶಕ್ಕೆ ಮನೆದೈವ
ವಿಂದಾತನಂ ಭಜಿಸಿ ಕಂದನಂ ಪಡೆವವೇ
ಳೆಂದು ವಿಭವದಿ ವನಿತೆ ಸಹಿತವೆಳ್ತಂದರಸನಭವಾಲಯಂ ಪೊಕ್ಕನು || ೪೨ ||

ಒಳಪೊಕ್ಕು ಸತಿಸಹಿತ ಸಾಷ್ಟಾಂಗದಿಂ ನಮಿಸಿ
ಜಲಗಂಧಮುಖ್ಯವಾದಷ್ಟವಿಧಪೂಜೆಯಂ
ಬಳಿಕರ್ಘ್ಯಮೊದಲಾದ ಪದಿನಾಱು ವಿಲಸದುಪಚಾರಂಗಳಂ ನೆಗಳುತ |
ಇಳೆಯಾಣ್ಮನಖಿಳ ಶರಣರು ನೋಡಿ ಸಂತಸಂ
ಗೊಳಲು ಕೈಮುಗಿದು ವೇದಾತೀತನಂ ವಿಷ್ಣು
ನಳಿನಸಂಭವರಡಿಯು ಮುಡಿಯು ಕಾಣದ ಭಕ್ತವತ್ಸಲನ ಕೀರ್ತಿಸಿದರು || ೪೩ ||

ದೇವ ಜಯಜಯ ಮೃಕಂಡುಗೆ ಕೃಪೆಯನಿತ್ತ ಶಿವ
ದೇವ ಜಯಪೂರ್ಣವಿತ್ತಂಗೆ ಕರುಣಿಸಿದಭವ
ದೇವ ಜಯ ದೇವರಾಜನ ಪೊರೆದ ವಿಖ್ಯಾತ ದೇವ ಷಣ್ಮುಖನ ತಾತ |
ದೇವ ಜಯ ಕೃಷ್ಣಪುತ್ರಪ್ರದಾಯಕಲಿಂಗ
ದೇವ ಗಿರಿಜಾ ನಿರೀಕ್ಷಣ ನಿರ್ಮಳಾಪಾಂಗ
ದೇವ ತಿರುವಂಜಕಳನಾಥ ಗಣಯೂಥಯೆಂದರು ಪುಣ್ಯದಂಪತಿಗಳು || ೪೪ ||

ಎಲೆ ದೇವ ಶಿವಯೋಗಿಯಂ ಲಿಂಗಭೋಗಿಯಂ
ನಲಿದು ಹರಶರಣೇಷ್ಟದಾನಿಯಂ ಜ್ಞಾನಿಯಂ
ಸುಲಲಿತದ ಸೌಂದರಪ್ರೇಮಿಯಂ ಸತ್ಕವೀಶ್ವರನೆನಿಪ ನಿಷ್ಕಾಮಿಯಂ ।
ಸುಲಭ ಪರಮಸ್ವತಂತ್ರನ ಮಂತ್ರ ಗಾತ್ರನಂ
ಕುಲಕೋಟಿಯಂ ಸಮುದ್ಧರಿಪ ಸತ್ಪುತ್ರನಂ
ಒಲಿದು ಪಾಲಿಸಬೇಹುದೆಂದು ಬಿನ್ನವಿಸುತಿರ್ದರು ಪುಣ್ಯದಂಪತಿಗಳು ॥ ೪೫ ॥

ನೆಟ್ಟನಾ ಬಿನ್ನಪವನವಧರಿಸಿ ಕೃಪೆಯಿಂದ
ದಿಟ್ಟ ಮೂಱುಳ್ಳ ತಿರುವಂಜಕಳನಾಥನುರೆ
ಕೊಟ್ಟಾ ಪ್ರಸಾದಮಂ ಕೈಕೊಂಡು ವರಮಹಾನಿರ್ಮಾಲ್ಯಮಂ ಭೂಪನು ।
ಹೆಟ್ಟುಗೆಯ ಮುಡಿಯೊಳಳವಡಿಸಿ ದೋಷಾವಳಿ ಘ
ರಟ್ಟನಂ ಬೀೞ್ಕೊಂಡು ನಿಜರಾಜಧಾನಿಗಳ
ವಟ್ಟ ಸಂಭ್ರಮದಿಂದೆ ಬಂದು ಪೊಗುವೆಡೆಯಲ್ಲಿ:ತೋಱುತ್ತ ಕಾರ್ಗಾಲವು ॥ ೪೬ ॥

ಎಲರ್ಗೆಣೆಯನೆಲರುಣಿಸುವಗೆಯನೆಲರ್ವಟ್ಟೆಗರ
ಕಲಸುಗೂಳಣ್ಣನಾ ಮುಪ್ಪೊಳಲ ಬಿಂಕದಿಂ
ಗೆಲೆ ಸೊನ್ನೆವೆಟ್ಟುವಿಲ್ವಿಡಿದು ಮೆಱೆವುತ್ತಿರ್ಪ ಪಲಗಣ್ಣನೆಱೆಯನೆಸೆವ ।
ನೆಲದೇರನುಱೆ ತುಳಿಲ್ಗೆಯ್ವ ಮುನ್ನೀರಣುಗಿ
ಗೊಲಿದಂಗೆ ಕೂರ್ತು ಪಾಱುಂಬಳೆಯನಿತ್ತವಂ
ತಲೆವೆಣ್ಣನಱುಮೊಗನ ತಂದೆ ದಯದಿಂದೆನ್ನ ಸಲಹುವಂ ಭೋಗಮಲ್ಲ ॥ ೪೭ ॥*

ಇದು ಸಕಲ ಭಕ್ತಪದಪದ್ಮ ಮಧುಕರಪುಣ್ಯ
ಸದನ ಗುಬ್ಬಿಯ ಮಲ್ಲಣಾರ್ಯರ ಕೃಪಾಪಾತ್ರ
ಮುದಿತ ನವರಸ ಭಾವ ಲಕ್ಷಣಾಲಂಕಾರ ನಿಪುಣನೆಂದೆನಿಸಿ ಮೆಱೆವ ।
ಚದುರ ಚೇರಮನೊರೆದ ಚೇರಮ ಚರಿತ್ರಮಂ
ಪದಪಿಂದ ಬರೆದೋದಿ ಕೇಳಿ ವಿಸ್ತರಿಸುವ
ರ್ಗೊದಗಿಪ್ಪುದಾಯುರಾರೋಗ್ಯ ಸಂಪದ ಸರ್ವಸಿದ್ಧಿ ಸತ್ಯಂ ತಥ್ಯವು ॥ ೪೮ ॥

---

* 'ಗ' ಪ್ರತಿಯಲ್ಲಿ ಈ ಪದ್ಯವಿಲ್ಲ.

# ಮೂರನೆಯ ಸಂಧಿ

**ಸೂಚನೆ :**

ಭೂಪನಂಗನೆಗಾದ ಗರ್ಭಚಿಹ್ನಂಗಳುಮ
ನಾ ಪುತ್ರನುತ್ಪತ್ತಿಯಂ ಬಾಲಲೀಲೆಯಂ
ರೂಪಸಂಪನ್ನ ಗೋಧರನ ನಱುಜವ್ವನದ ಬಗೆಗಳಂ ಬಿತ್ತರಿಪೆನು ॥

ಪಂಡಿತಯ್ಯಂ ನಾಡಿಯಂ ನೋಡಿ ಶಿವ ನಿಮ್ಮ
ಮಂಡೆ ಪಣೆ ಕೈಗಳೆಡೆಯಲ್ಲಿ ಶೀತೋಷ್ಣಮಂ
ಪಾಂಡುರಾಂಗದ ಬಲದೊಳೆಯ್ದೆ ನಿಶ್ಶಕ್ತಿಯಂ ಕಂಡು ಪೇಳ್ದುದನಱಿವುತ ।
ಕಂಡಕಂಡರ ಮನೆಯ ಪೊಕ್ಕು ವಿಷಮಾನ್ನಮಂ
ಕೊಂಡು ಕೆಡಬೇಡ ಕಂಡಾ ತೊಲಗದೆನ್ನೆರ್ದೆಯ
ಪುಂಡರೀಕದೊಳಿರ್ದು ಮದ್ಭಕ್ತಿಪಥ್ಯಸುಧೆಯುಂಡಿರ್ಕೈ ಭೋಗಮಲ್ಲ ॥ ೧ ॥*

ಇಂತಮರನಾಥನೀಶ್ವರನ ಕೃಪೆಯಂ ಪಡೆದು
ಕಾಂತೆಸಹಿತರಮನೆಯ ಪೊಕ್ಕಲ್ಲಿ ಕಾರ್ಗಾಲ
ವೆಂತೆಸೆದುದೆನೆ ಸತಿಯು ಗರ್ಭದಂತಾ ಮೇಘಗರ್ಭವಾ ತೊರೆವ ಮೊಲೆಯ ।
ಅಂತಾ ಪಯೋಧರಂ ಪುಟ್ಟೆ ನಲಿವಣುಗನೆಂ
ಬಂತೆ ಚಾದಗೆ [1]ನಲಿಯೆ[1] ನೀಲಕಂಠನ ನೃತ್ಯ
ದಂತಾಗ ಕುಣಿಯೆ ನವಿಲಾ ಹರುಷವರುಷವೆನೆ ಭೋರ್ಗರೆದು ಮುಳಿಗಱೆದವು ॥ ೨ ॥

ಬೇಸಗೆಯ ಬಿಸಿಲುರಿಗೆ ಬಾಯಾಱಿ ಮೇಘವಂ
ದಾ ಸಮುದ್ರೋದಕವನತಿತೃಷ್ಣೆಯಿಂ ಕೊಂಡ
ದೋಷದಿ ಜಲೋದರದ ರೋಗವಾಗಲ್ಕೊಂದು ಮೊಳಗೆಂಬ ಮೊರೆಯನಿಡಲು ।
ಆಸುರದಿ ಕಾರೆಂಬ ವೈದ್ಯನಾ ಮಿಂಚೆಂಬ
ಭಾಸುರದ ಶಸ್ತ್ರಮುಮನಲ್ಲಲ್ಲಿಗಿಡೆ ಪೊಳೆದು
ಸೂಸುತಿಹ ರಕ್ತಕಣವೊಗುವ ನೀರೆನಲಿಂದ್ರಗೋಪದೊಳ್ಮುಳಿಗಱೆದವು ॥ ೩ ॥

ಅಂಬುದಕೆ ಮುನಿವನಿಲನಡರಿದೇಣನ ಸುರಪ
ನಂಬು ಬಿಲ್ಲಂಬಿಡಿದೆಸಲ್ಕೇಱಿ ನಿಂದುಗುವ
ಕೆಂಬನಿಯಿವೆನಲಿಂದ್ರಗೋಪಮೊಪ್ಪುಗುಮಲ್ಲಿ ಕಾರೆಂಬ ಕರಿಯು ಬಂಟಂ ।
ಮುಂಬರಿದು ಕೊರಡುಮಂ ಪಿಡಿದು ಝುಳಪಿಸುತ ಮಿಂ
ಚೆಂಬ ಸುರಗಿಯಿನೆಸೆವ ಘುಡುಘುಡುಧ್ವಾನದಿಂ
ತಾಂ ಬಂದು ಘೂರ್ಮಿಸಲ್ಸುರಿವಧಿಕವೀರರಸವೆನೆ ಕೂಡೆ ಮುಳೆ ಸುರಿದವು ॥ ೪ ॥

---

* ‘ಗ’ ಪ್ರತಿಯಲ್ಲಿ ಈ ಪದ್ಯ ಹತ್ತನೆಯ ಸಂಧಿ ಸೂಚನೆಯಾದಮೇಲೆ ಬಂದಿದೆ. [1] ಮಿಸುಪ (ಕ)

ಮಳೆಯ ಧಾರೆಯೆ ಜಲಂ ಗಂಧವಹನೇ ಗಂಧ
ವಳವಟ್ಟ ಸೀಕರಂಗಳೆಯಕ್ಷತಂಗಳು
ಜ್ವಲಮೇಘಪುಷ್ಪವೆ ಪುಷ್ಪವೆಱಗುವ ಸಿಡಿಲ ಹೊಗೆ ಧೂಪವಾರತಿಗಳೆ ।
ಎಳೆಮಿಂಚು ತದ್ಘನೋಪಲವೆ ನೈವೇದ್ಯವಾ
ಗಳೆ ಮೂಡುಮಿಂದ್ರಧನು ತಾಂಬೂಲವಾಗೆ ಭೂ
ತಳದ ಲಿಂಗಕ್ಕಷ್ಟವಿಧಪೂಜೆಯೆಸಗಿದಂ ಕಾರೆಂಬ ಪರಮಭಕ್ತಂ ॥ ೫ ॥*

ಅಂತಪ್ಪ ಕಾರ್ಗಾಲವೆಸೆವುತಿರೆ ಭೂಪನಾ
ಕಾಂತೆ ಸಹಿತಂ ದೇವ ತಿರುವಂಜಕಳನಾಥ
ನಂ ತನ್ನ ಹೃದಯಕಮಲದೊಳು ಸ್ಥಿತಿಟ್ಟು ಸುತನಂ ಪಡೆವ ಮೋಹದಿಂದ ।
ಸಂತ ಶರಣರ ಸೇವೆಯಿಂದಖಿಳ ಭೂಮಿಪರ
ತಿಂತಿಣಿಗಳೋಲೈಸೆ ಧರಣೀತಳವನಾಳು
ತಂ ತಳ್ತು ಸುಖದೊಳಿರೆ ಶಿವಕೃಪೆಯ ಪುತ್ರಜನನದ ಚಿಹ್ನವಾಯ್ತುಬಲೆಗೆ ॥ ೬ ॥

ನಗೆಮೊಗದೆ ಮೊಡವಿಗಳ್ಮೊಳೆದೋಱೆ ತೋರಕುಚ
ಯುಗದ ನಸುವೇನೆಯೊಳ್ನಿಮಿರ್ದು ಕಿಳ್ಪೊಡೆಯೆಡೆಯೊ
ಳೊಗೆದ ನೋವಿಂ ಬಳ್ಳಿಯಾಗಿ ನುಣ್ಬೊಡೆಯಿಱುಂಕಿನೊಳೆ ಪರಕಲಿಸಿ ಪರ್ವಿ ।
ಸೊಗಸುವ ನಿತಂಬಮಧ್ಯದ ತಂಪಿನೊಳ್ಬಳೆದು
ಝುಗಝುಗಿಸಿ ಪುಷ್ಪಿತೆಯುಮಾಗುತಂತೆಸೆದಳಾ
ಮೃಗನೇತ್ರೆಯಮರನಾಥನ ರಾಣಿಯಮರಲತೆಯಂದದಿಂ ಫಲಮನೀಯೆ ॥ ೭ ॥

ಲೋಲಪುಷ್ಕರವಕ್ತ್ರೆ ತಿಲಕಿತಲಲಾಟೆ ಸುವಿ
ಶಾಲಮೃಗಮದಗಂಡತಳೆ ಕುಂಭಕುಚೆ ಕರಿಕ
ರಾಲಸಿತದಮಳೋರು ಗಜಗಮನೆ ಮಣಿಶೃಂಖಲಾಕಲಿತಚರಣೆ ಘುಸೃಣ ।
ಮೂಲಚಂದನರಜೋಗಾತ್ರೆ ನೀರಾಟಮಂ
ಬಾಲೆಯೊರೊಳಾಡಿ ಮನ್ಮಥಮಹೇಶ್ವರನ ಶುಂ
ಡಾಲಮೆನೆ ಚಾತುರ್ಥಿಕಾ ಸ್ನಾನಮಂ ಮಾಡುತಂ ದಣಿಂಬವನುಟ್ಟಳು ॥ ೮ ॥

ಥಳಥಳಿಪ ನಗೆಗಂಗಳಳವಟ್ಟ ಮುತ್ತುದೊಡ
ಗಳು ಮುಡಿದ ಮಲ್ಲಿಗೆಯ ಕುಳಿರ್ವ ಕರ್ಪುರದ ಬೊ
ಟ್ಟೆಳವಟ್ಟು ಬಜ್ಜರದ ಕಳಕಳಿಪ ಸುಲಿಪಲ್ಲ ನಳನಳಿಪ ತನುಕಾಂತಿಯು ।
ಬಳಸಿ ಚಂದನದಣ್ಪಿನೆಳವರೆಯದೊಳ್ಪಿನ
ಗ್ಗಳದಿಂದ ನಾಡೆ ನಿರ್ಮಳಮಪ್ಪ ಸಾತ್ವಿಕಂ
ಗಳೆನೆಯ್ದೆ ರಾಜಿಸುತ ನಳಿನಾಕ್ಷಿಯೊಪ್ಪಲಂದಿಳಿದನಿನನಪರಾಬ್ಧಿಗೆ ॥ ೯ ॥

* 'ಗ' ಪ್ರತಿಯಲ್ಲಿ ಈ ಪದ್ಯವಿಲ್ಲ.

ಕ್ರಮದಿಂದ ಪಗಲರಸಿಗೆಸೆವ ಜವ್ವನದ ಸಿರಿ
ಯಮುಮ ಜಾಱೆ ದೊಡೆ ಮಱಪಾಗಿ ಕೆಂದಳಿರ್ಗೆಯ್ಯೊ
ಳಮರ್ದಿರ್ದು ಜಗುಳ್ದ ಮುತ್ತಿನ ಮಣಿಯಿದಬ್ಧಿಯೊಳು ಬಿಳ್ದುದೊಯೆನಲದಲ್ತು |
ಕಮಲಿನಿಯ ಕೂಟದಿ ರಜಂಬೊರೆದೊಡವಯವದ
ತಿಮಿರಕ್ಕೆ ಮೆಯ್ದೊಳೆಯ ಪೊಕ್ಕನೋ ಪೇಳೆನಲು
ವಿಮಲ ಸಾಗರದೊಳು ಮುಳುಂಗಿದನಹೊ ಸೂರ್ಯನಸುರಕುಲವಿಜಯಶೌರ್ಯ ॥ ೧೦ ॥

ಅಗಲುತಿಹ ಚಕ್ರಂಗಳಾ ಮುಗಿವುತಿಹ ತಾವ
ರೆಗಳೆಳೆಯ ಮರ್ಬು ಶಿವನಿಳಯದಾನಕಘೋಷ
ವೊಗುಮಿಗೆಯ ಜಾರೆಯರ ಹರುಷವುಣ್ಮುವ ಮಾನ್ಗಳೇಳ್ಗೆ ದೀಪಂ ಚಂದ್ರನ |
ಸೊಗಸುವುತ್ಪತ್ತಿ ನೆಯ್ದಿಲ್ಗಳಲರ್ದಿರ್ಪ ಚೆ
ಲ್ವುಗಳು ಕುಳಿರ್ಗಲ್ಗರಂಗಲ್ಕೊಪ್ಪುವಿರುಳಲ್ಲಿ
ಜಗತಿಯೊಡೆಯಂ ವೈಭವದ ಸಭೆಯ ಬೀಳ್ಕೊಟ್ಟು ಪೊಕ್ಕನಂತಃಪುರವನು ॥ ೧೧ ॥

ಅರಮನೆಯನೊಳಪೊಕ್ಕು ಲಿಂಗಾರ್ಚನೆಯನೆಸಗಿ
ಪರಮಪ್ರಸಾದಮಂ ಭೋಗಿಸುತ ತಾಂಬೂಲ
ಕರನಾಗಿ ಹಂಸತೂಳದ ತಲ್ಪದಲ್ಲಿ ಗುಣವತಿಯೊಡನುಮಾಮಹೇಶ |
ಸ್ಮರಣದಿಂದಾ ನೃಪಂ ಸಜ್ಜನ ಸ್ನೇಹಬಂ
ಧುರಕೂಟರತ್ಯಂತಮೂರ್ಛೆಯಾಗುತ್ತೇಳೆ
ತರುಣಿ ನಿಜವಲ್ಲಭಂಗಳ್ತಿಯಿಂ ಕಂಡ ಸುಸ್ವಪ್ನಮಂ ನೆಱೆ ಪೇಳ್ದಳು ॥ ೧೨ ॥

ರನ್ನಬೆಳ್ದಾವರೆಗಳಂ ಮುತ್ತುಗೊಡೆ ಪಂದ
ರನ್ನಾಡೆ ಪಾಲ್ಗಡಲು ನೇಸಱೆತ್ತು ಸಿಂಗ
ಮುನ್ನೆಱೆವೆಱೆಗಳು ಮಱಯಾನೆ ಚವರಂ ಹೊನ್ನಗದ್ದುಗೆ ಕೊಳಂ ಬಾಸಿಗಂ |
ಕನ್ನಡಿಕಳಸವಿಂತು ಪದಿನಾಱು ಶೋಭನದೊ
ಳುನ್ನತದ ವೃಷಭನಂ ಕನಸಿನೊಳ್ ನಾಂ ಕಂಡೆ
ನೆನ್ನಾಣ್ಮಯೆನೆ ಕೇಳು ವನಿತೆ ನಂದಿಯ ಕೃಪೆಯ ಸುತನಹನೆನುತ್ತ ಬಳಿಕ ॥ ೧೩ ॥

ಪಾಲ್ಗೊಂಡು ಮಾತುಳಾಲಯದಲ್ಲಿ ತಾಯಿ ಪೇ
ಳಲ್ಗಾಡಿಯಿಂ ತಪದೊಳಿರ್ದಿಂದ್ರ ಬಾಧೆಯಂ
ಪುಲ್ಗೆ ಲೆಕ್ಕಿಸದೆ ಶಾಪೋಪಹತರಂ ಸಲಹಿ ಸುಕ್ಷೀರಸಾಗರವನು |
ಕಾಲ್ಗಣ್ಣನಿಂ ಪಡೆದು ತಮ್ಮವರನೆಲ್ಲರಂ
ಮೇಲ್ಗಯ್ದು ನಂದಿಸಮವೆನಿಸುವುಪಮನ್ಯುವಿನ
ವೋಲ್ಗರುವನುರಿಮಂತ್ರಸಿದ್ಧನಂತೆಮಗೊರ್ವ ನಲ್ಕಂದನಹನೆಂದನು ॥ ೧೪ ॥

ಎಂದ ರಾಯನ ನುಡಿಯ ಕೇಳ್ದು ಗುಣವತಿ ಮಹಾ
ನಂದದಿಂದನುರಾಗಿಪಂತೆ ಮೂಡಣದೆಸೆಯೊ
ಳಂದಾದುದರುಣೋದಯಂ ಕಮಲದೊಡನೆ ವನಿತೆಯ ವದನಕಮಲವಲರೆ ।
ಮುಂದೊಗೆವನಿಂ ಪಾಪವಳಿವಂತೆ ಕೆಡೆ ತಿಮಿರ
ಯಿಂದುಧರಭಜಕ ದಂಪತಿಗಳೊಪ್ಪಿದರಲ್ಲಿ
ಬಂದು ಶಿವನಾಣತಿಯ ಭಸಿತಕಾಯಂ ನೃಪನ ಸತಿಯ ಗರ್ಭಂಬೊಕ್ಕನು ॥ ೧೫ ॥

ಆಗಲಂತೊಂದೆರಳ್ಮೂಱುಮಾಸಂ ಬರ
ಲ್ಕಾಗಮೋಕ್ತಪ್ರಕಾರದ ಪಿಂಡದುದ್ಭವದ
ಯೋಗವಾ ಕಲ್ಪಕುಜದಂಕುರಂ ದಿನದಿನಕೆ ವರ್ಧಿಸುವ ಮಾಳ್ಕೆಯಿಂದೆ ।
ತ್ಯಾಗಿ ಸಿತಪಕ್ಷಶರದಿಂದುಗಂ ಪೆರ್ಚುವ ಕ
ಲಾಗಮವದೆಂತಂತೆ ನಡು ಪೊಂಗಿ ಪೊರೆಯೇಱ
ರಾಗಿಸಲ್ಮೆಱೆದುದಂದಾ ನೃಪನ ಸತಿಗೆ ಗುಣವತಿಗೆಸೆವ ಗರ್ಭಚಿಹ್ನಂ ॥ ೧೬ ॥

ಮಗನಾದಶೋಕೆಗಂ ನಿನ್ನ ಪದರಾಗಮಂ
ಸೊಗಸುವೀ ಧೈರ್ಯಮಂ ಕೊಡುವುದೆನಗೆಂದಂಘ್ರಿ
ಯುಗಳಮಂ ಭೂದೇವಿ ಪಿಡಿಯಲದ ಬಿಡಿಸಿ ನಡೆವಂತೆ ನಡೆ ಮಂದವಾಯ್ತು ।
ಮಿಗೆ ಹಿಡಿತವಾ ನಡುಕಮುಂ ಬಡತನದ ಭಂಗ
ಮೊಗೆವೀ ಕುಮಾರಕನ ದೆಸೆಯಿಂದಲಳಿವಂತೆ
ತೆಗೆದೋಡಿದವು ತಿವಳಿ ತತ್ಸ್ತನದ ಬರವಿಗಾ ಸತಿಗೆ ನಡು ನಲಿದುರ್ವಿತು ॥ ೧೭ ॥

ಕಱೆಗೊರಲನಾಣತಿಯ ಮುನಿ ಗುಣವತಿಯ ಪೊಡೆಯ
ತೆಱಪಿನೊಳಗಿರ್ದು ತನ್ನಾಭಿಕುಂಡದೊಳಿಟ್ಟು
ಮಿಱುಪಗ್ನಿಯಂ ಬೆಳಗೆ ಮಾಯಾಮಹೋಧೂಮ್ರವಲ್ಲಿಂದ ಪುಟ್ಟಿ ತಮದ ।
ತೆಱದಿಂದೆ ಮೇಲಕ್ಕೆ ಪಱುತಿರೆ ಪಿಡಿದದಂ
ನೆಱೆ ಕುಚವೆನಿಪ್ಪ ದುರ್ಗಕೆ ಪಾಯ್ದು ಕಂಕುಳೊಳು
ಸೆಱೆಯಿಟ್ಟ ಪೊಲ್ಪಾಸೆ ಮೊಲೆದುದಿಯ ಕಪ್ಪು ಕಕ್ಷದ ಕರ್ಬೊಗರ್ ಮೆಱೆದವು ॥ ೧೮ ॥

ಪೊಡೆವನೆಯೊಳಿರ್ಪ ನಲ್ಲಂಗೆ ತನ್ನಯ ಬೆರ
ಳ್ಗಡಿಯನಿತ್ತಪಳೊ ಭೂದೇವಿಯೆಲ್ಲಾದೇಶ
ದೆಡೆಯನೀಕ್ಷಿಸಲಾಗಿ ಕೇರಳಧರಿತ್ರಿಗೆಣೆಯಿಲ್ಲ ನೋಡೆಂದೆಯ್ದಿಪ ।
ಪಡಿಯ ಪಾಂಗೋಯೆನಲು ಮೃತ್ಸ್ನೇವನೆಯ ಮಾಳ್ಪ
ಳೊಡೆಯನಂಘ್ರಿಯ ಭಕ್ತಿಯಾಗುಳಿಕೆ ಪಿರಿದೆನಿಸು
ತಡಿಗಡಿಗೆಯಾಗುಳಿಸುತೊಪ್ಪಿದಳು ಭೂಭುಜನ ರಾಣಿ ನಿಜಮುಕ್ತಿಗೇಣಿ ॥ ೧೯ ॥

ಸುತನ ಬಯಕೆಗಳೆಂಬ ರತಿಲತಾನೀಕವೂ
ರ್ಜಿತ ಹೃದಯ ಭೂಮಿಯೊಳು ಪರಕಲಿಸಿತೆನೆ ಮತ್ತೆ
ಯತಿಶಯದೊಳೆರ್ದೆಯ ಸೆರೆ ಪಸುರೇಱಿ ಶಿವಕವಿತ್ವದ ರಸಾಮೃತಪಿಂಡವು ।
ಕ್ಷಿತಿಪನಂಗನೆಯ ಪೊಡೆಯೊಳಗಿರ್ದಡುಳಿದಶನ
ತತಿ ಸೇರದೆಂಬಂತೆಯೂಟ ಸೊಗಸದೆ ಗರ್ಭ
ಗತನಾ ಪ್ರಪಂಚುಗಳ ಹೇಮುಮಂ ಮಾಳ್ಪಂತೆಯೋಕರಿಕೆಯಾಯ್ತುಬಲಿಗೆ ‖ ೨೦ ‖

ತೊಂಡುಂಡು ಕಂಪುಗಳ ಪೂದೋಂಟದಲ್ಲಿ ನೆಱೆ
ಭಂಡಾಗಿ ಆಱಡಿಗೊಳುತ್ತಿರ್ಪ ತುಂಬಿಗಳ
ತಂಡಗಳೆನಿಪ್ಪನಡ್ವಾಹಂಗಳಂ ಕಟ್ಟುತಿಹ ಕವಲ್ಗಣ್ಣಿಗಳಿವೊ ।
ಗಂಡುಮಗನಂ ಪಡೆವೆನೆಂಬಕ್ಕಱಿಂದಮೀ
ಪುಂಡರೀಕಾಕ್ಷಿ ಮಿಗೆ ರಚಿಸಿದಲರ್ವಂದರದ
ಹಿಂಡುಗವರುಗಳೆನಲು ರಂಜಿಸಿತು ಗುಣವತಿಯ ಕುರುಳು ಮೋಹನದ ತಿರುಳು‖ ೨೧ ‖

ಕಾಂತೆ ಗರ್ಭಿಣಿಗೆ ನವಮಾಸ ಪೂರ್ಣಮುದಾಗೆ
ಯಂತು ಕಿಬ್ಬೊಡೆಯುಬ್ಬೆ ನಸುಬೆಮರ್ವನಿ ಮೊಗದೊ
ಳಂ ತೋಱೆ ಬಂಧುಗಳು ನಲ್ಪಿನಿಂ ಪ್ರಸವಸಮಯಮನಲ್ಲಿ ವಾರ್ದಿರಲ್ಕೆ ।
ಸಂತತ ಹಲಾಯುಧಂ ಚಂಡೇಶ ನಿಂಬಾಂಬೆ
ಯಿಂತಿವರ ಕೃಪೆವಡೆದ ಸುತನ ಜನನದ ವೇಳೆ
ಮುಂತಿವೇಕೆಂಬಂತೆ ಹಲ ಮುಸಲ ಪಿಚುಮಂದಮಂ ತಂದು ಹೊಱಗಿಟ್ಟರು ‖ ೨೨ ‖

ಅರಳಿತ್ತು ನಾಭಿ ಮೆಯ್ ಬಿಗುಹು ಸಡಿಲಿತ್ತಿರದೆ
ಕೆರಳಿತ್ತು ನಸುಬೇನೆಯಾ ಚೆಲ್ವಸುತನ ತಲೆ
ಮರಳಿತ್ತು ಮನೆಮನೆಗಳಿಂದೆ ಕಾಂತಾಜನಂ ನೃಪನರಸಿಯಿರ್ದಲ್ಲಿಗೆ ।
ತೆರಳಿತ್ತು ಪರಮಸಮಯತತಿ ಭಯಾತುರದಿಂದೆ
ನರಳಿತ್ತು ದುಷ್ಕರ್ಮಸಂತತಿಯದೆಣ್ದೆಸೆಗೆ
ಘುರಳಿತ್ತು ಸುಮುಹೂರ್ತದಲ್ಲಿ ವನಿತೆಗೆ ಪುತ್ರನುದಯಿಸುವಡನುವಾದನು ‖ ೨೩ ‖

ಉಱೆ ಚೆಲ್ವ ಪಾಲ್ಗಡಲೊಳಮರ್ದುಗಯ್ಯಂ ನಾಡೆ
ಮಿಱುಪ ಮೂಡಲ್ವೆಟ್ಟನಿಂದೆ ಧಳಧಳಿಪ ನೇ
ಸಱು ಸಗ್ಗವಸು ಬಸುಱೊಳಗ್ಗಳದ ತನಿವಾಲು ಕದಿರ್ಗಱೆವ ರನ್ನಮಲೆಯಿಂ ।
ಮೆಱೆವ ಮಣಿಗಳ್ಪುಟ್ಟುವಂತಲ್ತು ದೇಶಿಕರ
ಎಱೆಯನಿಂದ್ಯೈದಕ್ಕರಂ ಪೊಣ್ಮುವಂದದಿಂ
ನಿಱುಗುರುಳ ನೀಱೆಯಿಂದೊಗೆದನಂದಾ ಚೆನ್ನಕಂದನಾನಂದದಿಂದ ‖ ೨೪ ‖

ಲೇಸೆನಿಪ ವಿಕ್ರಮಾಬ್ದಂ ಮಿಸುಪ ಕಾರ್ತಿಕ
ಮಾಸವಾ ಶುದ್ಧಪಾಡ್ಯೋದಯಂ ಬಳಿಕ ರವಿ
ವಾಸರಂ ಸ್ವಾತಿನಕ್ಷತ್ರವತಿಶಯ ಶುದ್ಧಯೋಗ ಭವಕರಣದಲ್ಲಿ ।
ಶ್ರೀಸುಲಗ್ನಂ ವೃಷಭದುತ್ತರದ ಹೋರೆಯ ವಿ
ಲಾಸದೇಕಾದಶಸ್ಥಿತ ನವಗ್ರಹದೊಳಂ
ದಾ ಸುಪುತ್ರಂ ಪುಟ್ಟಿದಂ ಶುಭಚರಿತ್ರ ಸನ್ಮಿತ್ರ ಪ್ರಭಾವ ಗಾತ್ರಂ ॥ ೨೫ ॥

ಬೆಂಗದಿರನಗ್ಗಳದ ಕುಲತಿಲಕನಣುಗನಂ
ತಂಗದಿರ್ವೊಗದಬಲೆಯರ್ಕಳಿಂದಂ ತರಿಸಿ
ಮಂಗಳ ಮುಹೂರ್ತದೊಳು ಸದ್ಬುಧರು ಪೊಗಳೆ ಗುರುವಿಂದವಗೆ ಭಸಿತವಿಡಿಸಿ ।
ಪಿಂಗದೆ ಕವೀಶ್ವರರು ಕೀರ್ತಿಸಲು ಮಂದಸ್ಮಿ
ತಂಗಳಿಂದುತ್ತಮದ ಮೀನಕೇತನ ಪೋಲ್ವ
ಸಿಂಗರದ ನೃಪನೀಕ್ಷಿಸಲ್ ಜ್ಯೋತಿಷರು ನವಗ್ರಹ ಬಲೋನ್ನತಿವೇಳ್ದರು ॥ ೨೬ ॥

ಆ ಸಮಯದೊಳು ಪ್ರಭಾಕರ ಗುರುವರೇಣ್ಯಂ ವಿ
ಲಾಸದಿಂ ತದ್ಭೂಪರನ್ವಯೋದ್ಧರಣನಹ
ದೇಸಿಕಂ ಸದ್ವಿಧಾನದೊಳಲ್ಲಿ ಶೈವೋಪದೇಶಮಂ ಕರುಣಿಸುತ್ತ ।
ಭಾಸುರದ ನಂದಿಕೇಶನ ಕೃಪಾಪಾತ್ರನ
ಪ್ಪಾ ಸುತಗೆ ಗೋಧರನೆನಿಪ್ಪ ಪೆಸರೀವುತೆಳ
ನೇಸಱಿಂತಿರ್ಪವನ ಬಗೆಯನುಸುರ್ದಂ ತ್ರಿಕಾಲೋಚಿತಜ್ಞಾನಿ ಮಾನಿ ॥ ೨೭ ॥

ದೂರ್ವಾಸಮುನಿಯ ಶಾಪದೊಳು ಯಾದವಕುಲದ
ಸರ್ವಸುತರೊನಕೆಯಿಂದಂ ಪಿಂದೆ ತಮ್ಮ ಪಿತೃ
ಪೂರ್ವಾಮರಧ್ವಂಸಿ ಸಹಿತಲಳಿದಂತುಟಲ್ತೀ ಮಹೀಪತಿಯಣುಗನು ।
ಗರ್ವವಿರಹಿತನು ಕುಲಕೋಟಿಯ ಸಮುದ್ಧರಿವ
ನೊರ್ವಂಗೆ ಸರಿಯೆ ಬಹುಪುತ್ರರಿಂದಂ ರಜತ
ಪರ್ವತಕೆ ಧಾಳಿಯಿಡದಿರನೀತನೆಂದನಂತರ್ವಿಮಲ ಗುರುರಾಯನು ॥ ೨೮ ॥

ಪೋಗಲತ್ತಲ್ ದೇಶಿಕೇಂದ್ರನಂದಿತ್ತ ಭೂ
ಭಾಗದೊಡೆಯಂ ಜಾತಕರ್ಮಮಂ ಮಾಡಿಯನು
ರಾಗದಿಂ ಹನ್ನೆರಡು ದಿನದಲ್ಲಿ ಬಹುದಾನ ಗಣಪರ್ವಮಂ ವಿರಚಿಸಿ ।
ಚಾಗದಿಂ ಧರ್ಮಾರ್ಥಕಾಮಮೋಕ್ಷಂಗಳೆಂ
ಬೀ ಗುಣವೆ ಪದವಾದ ವೃಷಗರ್ಭವಾಸ ಶಿವ
ಯೋಗಿ ಪುತ್ರನ ರನ್ನದೊಟ್ಟಿಲೊಳಗಿಟ್ಟಲ್ಲಿ ತೂಗಿದರು ಸತಿಯರ್ಕಳು ॥ ೨೯ ॥

ಜೋಜೋ ಕುಮಾರ ಸಸ್ಮೇರ ಘನತೇಜನೇ
ಜೋಜೋ ಧರಾಮದನವದನ ಪಂಕೇಜನೇ
ಜೋಜೋ ಮಹೀಪಾಲ ಶೀಲಗುಣನೈಜನೇ ಜೋ ನವ್ಯಗುಣಭಾಜನೆ ।
ಜೋಜೋ ಮರುದ್ಗಣ ಲಸದ್ಗುಣ ಸಮಾಜನೇ
ಜೋಜೋ ಸಶಿವತಲ್ಪ ವರಕಲ್ಪಭೂಜನೇ
ಜೋಜೋಯೆನುತ್ತ ಪಾಡಿದರು ತನುಜಾತನಂ ಖ್ಯಾತನಂ ಸತಿಯರ್ಕಳು ॥ ೩೦ ॥

ಚಂಡಿಕಾಪತಿಯ ಪಟ್ಟಣಕೆ ತನುವೆರಸಿ ನಡೆ
ಗೊಂಡೋಹಿಲಯ್ಯಂಗೆ ಪುರಜನರನೆಲ್ಲರಂ
ಕೊಂಡೊಯ್ದ ಗುರ್ಜರಂಗಾ ನವಗ್ರಾಮವೆಯ್ದಿಸಿದಾ ಹಲಾಯುಧಂಗೆ ।
ಚಂಡ ಛತ್ತೀಸ ನಗರವನೊಯ್ದ ಬುಧಮಣಿಕ
ರಂಡನಹ ಸಾಮವೇದಿಗೆ ಮಳೆಯನೃಪಗೆ ಸರಿ
ಗಂಡು ಮಗನಂ ಹಾಡಿ ತೂಗಿದಳು ಭೂಪತಿಯ ಸತಿ ಲಸನ್ಮತಿ ಗುಣವತಿ ॥ ೩೧ ॥

ಆ ರತ್ನಸಾನುವಾಲಯವಾದ ಘನದೇವ
ತಾರತ್ನವೆನಿಪ ಶಂಕರನೆಡೆಗೆ ಪೋಪವಂ
ಗೀ ರತ್ನಗರ್ಭದಾಶಾಪಾಶವಾವುದೆಂದೊದೆವಂತೆ ರಾಜಿಸಿರ್ಪ ।
ಭೂರತ್ನವೆನಿಪ ಕೇರಳಕಧಿಪ ಶಿಶುಗಳ ಶಿ
ರೋರತ್ನವೆನಿಪ ಗೋಧರಮಹೀಪಾಲಂ ಮ
ಹಾರತ್ನಕಿರಣದಾ ತೊಟ್ಟಿಲೊಳು ಪದಯುಗವನಡಿಗಡಿಗೆ ಬಿಡದಾಡಿಪಂ ॥ ೩೨ ॥

ರೌದ್ರಾರಿ ನೃಪ ಧೈರ್ಯವೆಂಬ ಲಗ್ಗೆಯನಿಡಲ್
ತದ್ರತಿಯೊಳೊಡರಿಚಿದ ಮಣಿಚೆಂಡೊ ಮೇಣ್ಬರ್ಪ
ಭದ್ರಗಾಯಕಗೀಯೆ ಪೊಱಗಟ್ಟಿಕೊಂಡಿರ್ದ ಚಿನ್ನರನ್ನದ ಪುಂಜವೊ ।
ರುದ್ರಗರ್ಪಿಸುವ ಕಾವ್ಯಾಲಂಕೃತಿಯ ರತ್ನ
ಸದ್ವೃಷದ ಪಿಂಡವೋಯೆಂದು ಭಾವಿಸಲು ತ
ದ್ವಿದ್ರುಮಾಕರಪುತ್ರನೀಕ್ಷಿಪಂ ಲಂಬಣದ ರಾಗಮಯ ಕಂದುಕವನು ॥ ೩೩ ॥

ತೊಟ್ಟಿಲೊಳಗೀ ತೆಱದೊಳಿರ್ಪ ಸುತನಂ ತಾಯಿ
ನಿಟ್ಟಿಸುತ ಕಣ್ಣೀರೆನುತ್ತ ತೂಪಿಱಿದು ಬಳಿ
ಕಿಟ್ಟು ಸಿತಭಸಿತಮಂ ಕಕ್ಷಪುಟದೊಳ್ಕಯ್ಯ ಸಾರ್ಚಿ ಪಿಡಿದೊಯ್ಯನೆತ್ತಿ ।
ನಿಟ್ಟೈದೆ ವಕ್ಷದೊಳಮರ್ಚಿರೋಮಾಂಚವಳ
ವಟ್ಟು ಝುಮ್ಮೆನಲು ಮೊಲೆಗೊಟ್ಟು ನೆಲವಾಸಿನೊ
ಳ್ಪಟ್ಟಿರಿಸಿ ಮಿಗೆ ಸಪುರಮಂ ಪೊದೆಸಿ ನೋಡಿದಳ್ಕಟ್ಟಕ್ಕಱುಣ್ಮುತಿರಲು ॥ ೩೪ ॥

ಒಲ್ಲೆನೀ ಭೋಗದಾಸೆಯನೆಂದು ತನ್ನ ಮನ
ದಲ್ಲಿ ಯೋಚಿಸಿ ಸುಮ್ಮನಿರ್ಪನೋ ಸಂಸಾರ
ದಲ್ಲಿ ಸಿಕ್ಕಿದೆನೆನ್ನ ಬಿಡಿಸಿಕೊಳ್ವರ ಕಾಣೆನೆಂದಳು[1]ತ್ತಿರ್ಪನೊಮ್ಮೆ[1] ।
ಸಲ್ಲದಿನ್ನೀ ಗುಣಸ್ನೇಹಮಂ ದಹಿಸಿ ಪೀ
ರ್ದಲ್ಲಾಗಳೆಯ್ದೆ ನಿಂದುರಿವ ದೀಪಂಗಳಿದಿ
ರಲ್ಲಿರಲ್ಬಹುದೆಯೆಂದಾ ದೀಪಮಂ ನೋಡಿ ನಗುವನಾ ಕುಲದೀಪನೂ ॥ ೩೫ ॥

ಕೆಲಬಲದ ಭೂಮಿಗಳನೊತ್ತಿ ತನ್ನಯುದೊಂದು
ಸಲೆ ಭುಜಪರಾಕ್ರಮದೊಳಳವಡಿಸುತಿರ್ದೆಯಲ್ಲಿ
ಸುಲಭದಿಂದಮುರ್ದಪ್ಪಿ ಬಲ್ಮೆಯಿಂ ಮುಂದಮುಂದಕ್ಕೆ ನಡೆದಾಳ್ವೆನೆನ್ನ ।
ಕುಲಬಿರಿದು ರಿಪುರಾಯ ವೇಶ್ಯಾಭುಜಂಗನೆಸೆ
ಸಲುತಿರ್ಪುದೆಂಬುದಂ ತೋರ್ಪಂತೆ ಪೊಡೆಮಗಿದು
ನೆಲನ ಮುಡುಹಿನ ಸಾಹಸದಿನೊತ್ತಿಯುರದಿಂದೆ ನಿಮಿರ್ದು ನಡೆವಂ ಕುಮಾರಂ ॥ ೩೬ ॥

ನೆಲನ ಬಗಿದೊಳಪೊಕ್ಕಡಂ ನಂಬಿ ಬಿಟ್ಟೆನ್ನ
ಕೆಲಬಲದೊಳಾ ದಿಗಂತಕ್ಕಾಗಿ ಪೋದೊಡಂ
ಮಲಹರನ ಕೈಲಾಸದೂರ್ಧ್ವಕ್ಕೆ ಪಾಯ್ದೊಡಂ ಬಿಡುವೆನೇ ಎಂಬಂದದಿಂ ।
ನಲಿದು ಭೂಮಿಯ ಚುಂಬಿಸುತ ವಾಮದಕ್ಷಿಣಕೆ
ತಲೆಯೆತ್ತಿ ನೋಡಿ ಕೋಪದೊಳು ಗದ್ದುಗೆವೊಯ್ವ
ವೊಲು ಕುಳಿತು ಕಯ್ಯುಱುವಂದಿನಾಕಾರಮಂ ತೋಱು ಮೆಱೆವಂ ಚೀರಮಂ ॥ ೩೭ ॥

ಹೊಂದುವವು ಧರ್ಮಾರ್ಥಕಾಮಮೋಕ್ಷಂಗಳಾ
ನಂದೀಶ್ವರನ ಕೃಪೆಯೊಳೆಂಬಂತೆ ಕೈಕಾಲ್ಗ
ಳಿಂದೆ ನಡೆವಂ ಶಿವನ ಬಾಗಿಲೊಳ್ತಡೆದೊಡಾ ಸೌಂದರಂ ಬಿನ್ನವಿಸಲು ।
ಇಂದುಧರನೊಲ್ದು ಕರೆ ಎಂಬನ್ನೆಗಂ ನಡುಕ
ದಿಂದೆ ಕನ್ನಡಿ ಗೋಡೆವಿಡಿದಿರ್ಪ ಮಾಳ್ಕೆಯಿಂ
ಕಂದನಾ ಭಿತ್ತಿಯಂ ಪಿಡಿದು ನಿಲ್ವಂ ಬಿದಿಯ ಗೆಲ್ವ ಲೋಕಕ್ಕೆ ಚೆಲ್ವ ॥ ೩೮ ॥

ಪಾವಿಗಾಂ ತಲೆವೊಱೆಯದಾಗಿ ಮಾತಂಗವಂ
ಶಾವಳಿಗಳಿಂದಲೆತ್ತಿಸಿಕೊಂಡು ಸುರುಳ್ದಸುರ
ಗೇವೆ ನಾಂ ಕಂಕುಳೊಳ್ಕೂಸಾದೆನೆನುತಲ್ಲೊಮ್ಮೊಮ್ಮೆ ನಡುಗುವ ಭೂಮಿಯ ।
ಶ್ರೀವಿಮಲ ಶಿರದಲ್ಲಿ ಪಾದಾಭಯಂಗುಡುವ
ಭಾವದಿಂ ದಟ್ಟಡಿಯನಿಡುವನಾ ದಾಳಿಯಂ
ದೇವ[2]ನೂರ್ಗಂ[2] ನಡೆವನೆಂಬಂತೆ ಪರಿದಾಡುವಂ ನಲಿದು ಚೀರಮಾಂಕಂ ॥ ೩೯ ॥

---

[1] ವನೊಮ್ಮೆಗೊಮ್ಮೆ (ಗ). [2] ಮಾರ್ಗವ (ಗ).

ಹೃದಯದೊಳಗಣ ಮನೋಹರಿಣನೆದ್ದಾಡದವೊ
ಲದಕೆ ಕಾಪಿಟ್ಟಂತೆ ರಂಜಿಸುವ ಹುಲಿಯುಗುರ
ದೆದೆಗೆ ಭೂಷಣವಾಗಲಾಜ್ಞಾಸುಚಕ್ರದುರುತರ ಮಹಾಲಿಂಗಪೂಜೆ- ।
ಗಿದು ಪುಷ್ಪಪತ್ರಿಯೆಂಬಂತೆ ಪಣೆಯಿರಳೆಲೆಯ
ಮುದದಿಂ ಪ್ರಸಾದಲಿಂಗಾರ್ಪಣದ ಚೂತವೃ
ಕ್ಷದ ಫಲವಿದೆಂಬಂತೆ ಕರ್ಣದೊಳಗೊಲೆವ ಮಾಗಾಯುಸುತನೊಪ್ಪಿರ್ದನು ॥ ೪೦ ॥

ಇಟ್ಟ ನಿರ್ಮಲಭಸಿತ ಶುಭ್ರತ್ರಿಪುಂಡ್ರದಿಂ
ತೊಟ್ಟ ರುದ್ರಾಕ್ಷೆ ಮೌಕ್ತಿಕ ಕಂಠಮಾಲಿಯುಳ
ವಟ್ಟ ರನ್ನದ ಹಸ್ತ ಕಟಕದಿಂ ಪೊಸಮಿಸುನಿಯಿಚ್ಚವಡಿಯುಡಿದಾರದಿಂ ।
ಕಟ್ಟಿರ್ದ ಹೊನ್ನಘಂಟೆಯ ಪಾದದಲ್ಲಿ ನೇ
ರ್ಪಟ್ಟ ಪೊಂಗೆಜ್ಜೆಯಂದುಗೆ ಪೊಳೆವ ಮಾಂದಳಿ
ರ್ವಟ್ಟಯುತ್ತಮದ ಪೈರಣೆಯಿಂದ ಮೆಱೆದನಾ ಪುತ್ರ ಸೌಂದರ್ಯಗಾತ್ರ ॥ ೪೧ ॥

ಚೆನ್ನಕುವರಂ ಬಳೆವುತಿರ್ದನೊಂದೆರಡು ಮೂ
ಱುನಾಲ್ಕುನೈದಾಱುಬರಿಸಮುಂ ಕಳಿದು ಮ
ತ್ತುನ್ನತದ ಸಪ್ತವತ್ಸರಮಪ್ಪ ಕಾಲಕ್ಕೆ ಲಿಖಿತವಾಚಕಗಣಿತವು ।
ಸನ್ನಹಿತ ಸಾಹಿತ್ಯ ಸಂಗೀತ ಭರತವೈ
ದ್ಯನ್ನಾಡ್ವೇದಶಾಸ್ತ್ರಂ ಮುಖೋದ್ಗತವಾಗು
ತನ್ನಲಿದು ವರ್ಧಿಸುತ ಷೋಡಶಪ್ರಾಯದೊಳು ಕೇರಳಕುಮಾರನೆಸೆದಂ ॥ ೪೨ ॥

ಥಳಥಳಿಸಿ ಬೆಳ್ವಿಳಗನುಗುಳ್ವಪಾಂಗಂ ಕಾಂತಿ
ಕೆಳೆಗೊಂಡ ವದನಕಮಲಂ ನಳನಳಿಪ ತೋಳು
ಬಲದಾ ಭುಜದ್ವಯಂ ಪೇರುರಂ ತೆಳ್ವಸುಱು ಕೊಬ್ಬಿದ ನಿತಂಬಯುಗಳಂ ।
ಪೊಳೆವ ನುಣ್ದೊಡೆ ಚೆಲ್ವನಾಂತ ಕಣಕಾಲ್ಗಳು
ಜ್ವಲಿಪ ಗುಲ್ಫಂ ರಾಗರಸವಾಂತ ಪದತಳಂ
ಗಳಿನೊಪ್ಪುತಿರೆ ಕುಮಾರಂ ಬಂದುದಾ ಶರತ್ಕಾಲ ದಿಗ್ವಿಜಯ ಮೂಲ ॥ ೪೩ ॥

ನೋಡುತಿಹ ಕಾಳರೀ ಪುಳ್ಳೊಡೆಯದಾ ವೇದ
ದಾಡಂಬರವನೊದಱುವೆಡಗಯ್ಯ ಕಿವಿಯಲ್ಲಿ
ಹಾಡುತಿಹ ಕಡುಕು ಬೊಬ್ಬಿಡುತಿರ್ಪ ಕಂಠಮಾಲೆಯು ಬಳಿಕ ಹೊಡೆಯನೆತ್ತಿ ।
ಆಡುತಿಹ ಕಡಗವಂ ತೆಳುನಾಲಗೆಗಳಂ
ನೀಡುತಿಹ ನೇತ್ರವೆಲ್ಲಾ ಜರವನೆಯ್ದೆ ಮುಳು
ಗಾಡಿಸುವ್ಕತಲೆಯನಾಂತಖಿಳರಂ। ಪೊರೆದೆಸೆವ ಗಾಡಿಯುಹ ಭೋಗಮಲ್ಲ ॥ ೪೪ ॥*

* ‘ಗ’ ಪ್ರತಿಯಲ್ಲಿ ಈ ಪದ್ಯವಿಲ್ಲ.

ಇದು ಸಕಲ ಭಕ್ತಪದಪದ್ಮ ಮಧುಕರಪುಣ್ಯ
ಸದನ ಗುಬ್ಬಿಯ ಮಲ್ಲಣಾರ್ಯರ ಕೃಪಾಪಾತ್ರ
ಮುದಿತ ನವರಸ ಭಾವ ಲಕ್ಷಣಾಲಂಕಾರ ನಿಪುಣನೆಂದೆನಿಸಿ ಮೆಱೆವ |
ಚದುರಚೇರಮನೊರೆದ ಚೇರಮಚರಿತ್ರಮಂ
ಪದಪಿಂದ ಬರೆದೋದಿ ಕೇಳಿ ವಿಸ್ತರಿಸುವ
ಗೊರ್ದಗಿರ್ಪುದಾಯುರಾರೋಗ್ಯ ಸಂಪದ ಸರ್ವಸಿದ್ಧಿ ಸತ್ಯಂ ತಥ್ಯವು || ೪೫ ||



# ನಾಲ್ಕನೆಯ ಸಂಧಿ

**ಸೂಚನೆ :**

ದಿಗ್ವಿಜಯಕಮರನಾಥಂ ಪೋಗಿ ಜಯಿಸಿ ಮೃದು
ವಾಗ್ವಿಚಕ್ಷಣ ಪಾಂಡ್ಯನೊಳು ಮಿತ್ರತೆಯನೆಸಗಿ
ರುಗ್ವಿನುತ ತಿರುವಂಜಕಳನಾಥನುತ್ಸವನೊಡರಿಚಿದನೇಳ್ಗೆಯಿಂದೆ ||

ಈರೇಳು ನೆಲದ ರಾಯಂಗಡಾ ನೃಪನೀತಿ
ಯಾರೈಕೆಯಿನಿತಿಲ್ಲ ಮುನಿದಜನೆನಿಪ್ಪ ಬಡ
ಹಾರುವನ ತಲೆಯರಿದಹೋ ವಿಷ್ಣುಪಾರ್ಥಿವನ ಕಣ್ಣ ಕಳಸಿದೆಯದಲ್ತು ||
ಗೌರಿ ಪಟ್ಟದ ರಾಣಿಯನ್ನದೆಡಗಡೆಗೊತ್ತಿ
ನಾರಿ ಗಂಗೆಯ ಶಿರವನಡರಿಸಿದೆ ಕಿಱಿದೆನ್ನ
ದಾರು ಮೆಚ್ಚುವರು ಮತಿಗೆಟ್ಟೈಯ್ಯ ಮಾನಸಿಕೆ ನಿನಗಿಲ್ಲ ಭೋಗವುಲ್ಲ || ೧ ||

ಈ ಪರಿಯೊಳಮರನಾಥನ ಸುತನ ಹರೆಯ[1]ದಂ
ತಾ[1] ಪೂರ್ಣಶಶಿಗೆ ಕಲೆಯೇಱಿದವು ಕಂಡವರ
ಪಾಪಪಂಕದ ತೆಱದೊಳೆಸೆವ ಕೆಸಱೂಣಾಗಿತ್ತು ರಿಪುನೃಪರ ವೀರರಸದ |
ಕೂಪದಂತೆಯ್ದೆ ನೀರ್ದೆಗೆದವಾ ಸರಸಿಗಳು
ಮಾಪತಿಯ ಮೊಗದಂದದಿಂ ಬೆಳರ್ತುದು ಮೇಘ
ವೇಪೇಳ್ವಿನೊಪ್ಪಿರ್ದುದಾ ಶರದೃತು ವೈರಿವಿಜಯಮಾರಣ ಸತ್ಕ್ರತು || ೨ ||

ಅಳವಡೆ ಶರತ್ಕಾಲವೆಂದೆಂಬ ಚಿಪ್ಪಿಗಂ
ಬಿಳಿಯ ಹಳೆಯಂಬರಂ ಹಱಿಯದಂತಾ ಬರ್ಪ
ಚಳಿಯ ತಾಳುವ ತೆಱದಿ [ನೆಱು] ಹೊಲಿದ ಬೆಳ್ಗೊಡೆಯೊ ಬಾಂಬೊಳೆಯ ಜತ್ತಳಗಳೊ |
ತಿಳಿಮೊಡೆಯನಂತನೆಂಬಹಿಪತಿಯ ಪೆಡೆಯಿಂದೆ
ಕಳೆದ [2]ನಿರ್ಮೋಕವೋ[2] ತತ್ಕಾಲವೆಂದೆನಿಸು
ವೆಳೆವೆಣ್ಣುಡಲ್ ನಿಱಿಯ ಪಿಡಿದ ದೂವಟವೊ ಪೇಳೆನಲು ಬೆಳ್ಮುಗಿಲೆಸೆದವು || ೩ ||

ಭೂರಮಣಗಾ ಶರತ್ಕಾಲ ದಿಗ್ವಿಜಯಕೆ ಕು
ಮಾರಪರಿಣಯಕೆಂದು ಬಿನ್ನವಿಸಿದುತ್ತಮ ವಿ
ಚಾರಪರಮಂತ್ರಿಗಂ ನಿರವಿಸುತ್ತಂ ಗಮನಭೇರಿ ದನಿ ಮಾಡಲೆಂದು |
ಆರುಭಟೆಯಿಂ ನೆರೆದ ಚತುರಂಗ ಸೇನೆಯಿಂ
ವೈರಿಗಳ ತಲೆಯ ಚೆಂಡಾಡಿ ಕಪ್ಪಂಗೊಟ್ಟ
ಧಾರುಣೀಶರ ಸಲಹಲೆಂದಮರನಾಥನಂದರರೆದಂಡೆತ್ತಿ ನಡೆದಂ || ೪ ||

---

[1] ವೆಂದಾ (ಕ). [2] ನಿರ್ಮೋದಕವೊ (ಗ).

ಚಾರುಚಕ್ರಂಗಳೊಂದಿದ [1]ಹೇಮ[1], ಮಯುದ ಪೊಂ
ದೇರನಡರಲ್ಕೆ ಕಂಗೆಟ್ಟು ರಿಪು ಕೌಶಿಕಂ
ಸಾರೆ ದೆಸೆಗಳ ಗಂಹರಂಗಳಂ ಬಳಸಿ ಬಹ ನೃಪರ ಮುಖಕಮಲವಲರೆ ।
ವೈರಿರಾಯರ ಕೀರ್ತಿ ಮಾಸೆ ಚತುರಂಗಬಲ
ದಾರುಭಟಿಯಿಂದ ಬಹುವಾದ್ಯಂಗಳೇಳ್ಗೆಯಿಂ
ಸೂರಕುಲದೀಪನೊಲಿದುತ್ತರಾಯಣನಾಗಿ ನಡೆದನೇವಣ್ಣಿಸುವೆನು ॥ ೫ ॥

ಯಾಗದಶ್ವವನಿಂದ್ರನಾಳು ದಿವಿಗೊಯ್ಯೆ ನೃಪ
ರಾಗ ಬೆಂಬತ್ತಲವನಿಳಿಯಲಾ ಪಾತಾಳ
ಕಾಗಿ ಮಣ್ದಿಂದು ಕೊಂಡೆಯ್ದಿ ಫಣಿಪನ ಪೊಳಲ ಮುತ್ತುವರೊಪ್ಪುಗೊಡಲು ।
ಆಗ ಬಯಲಾಗಿ ವಾಜಿಯು ಕಪಿಲಮುನಿಯು ಪಿಂ
ಭಾಗದೊಳಗಿಡಲಲ್ಲಿ ಸೆಣಸಿ ಮಡಿದಾ ಸಗರ
ರೀಗಲೀಶ[ನ ಸು]ಪ್ರಸಾದಿಯಪ್ಪಮರನಾಥನ ಪೆರ್ಬಲಕ್ಕೆ ಪಡಿಯೆ ॥ ೬ ॥

ಅಂಗದೇಶಕ್ಕೆತ್ತಿ ನಡೆದು ತನ್ನೃಪತಿಯಂ
ಭಂಗಿಸಿ ಗದಾದಂಡದಿಂದ ಮನ್ನಿಸುತ ಕಾ
ಳಿಂಗನಂ ಮಂತ್ರಶಕ್ತಿಯೊಳು ಬಂಧಿಸಿ ಪಿಡಿದು ಬಿಟ್ಟು ಬಳಿಕಧಟನಿಂದ
ವಂಗದಗ್ರಣಿಯಂ ಪರಾಕ್ರಮಾನಲನಿಂ ಕ
ರಂಗಿಸುತ ಮತ್ಸ್ಯನಂ ತನ್ನ ಬಲಜಾಲದಿಂ
ದಂ ಗೆಲ್ದು ಕೋಳಾಹಳಂ ಮಾಡುತಿರ್ದನಾ ರಾಯ ಪರಿಜನ ಸಹಾಯ ॥ ೭ ॥

ಕುಂತಳನ ಗೆಲಿದು ಮುಂದಲೆವಿಡಿದು ತುಳುವನೃಪ
ನಂ ತೊತ್ತುಳಂದುಳಿದು ಮತ್ತೆ ಕರ್ಣಾಟ ಭೂ
ಕಾಂತನಂ ಕಿವಿವಿಡಿದು ಸೆಳೆದು ಪರವೇಶ್ಯಾಭುಜಂಗ ಚೋಳಕ್ಷಿತಿಪನ ।
ಅಂತೋಡಿಸುತ್ತ ವಾಲ್ಮೀಕಪುರಮಂ ಸಾರ್ಚಿ
ನಿಂತ ಕೊಂಕಣನಳ್ಕಿ ದೀರ್ಘದಂಡದಿ ನಮಿಸ
ಲಿಂತು ದಿಗ್ವಿಜಯಮಂ ಮಾಡುತಿರ್ದಂ ಕೇರಳಾಧೀಶ ಸುಪ್ರಕಾಶ ॥ ೮ ॥

ಸೂರಸೇನಾಧಿಪನ ರಾಹುವಿಂಗೆಣೆಯಪ್ಪ
ಕೂರಲಗಿನಿಂ ಗೆಲ್ದು ಪಲ್ಲವನ ಭಂಗಿಸುತ
ಭೂರಿಪ್ರತಾಪಾಗ್ನಿಯಿಂದಂ ವರಾಟನಂ ಕವಡೆಯಿಂ ಕಡೆಮಾಡುತ ।
ಪಾರಿಯಾತ್ರನ ಬಿಡದೆ ಪಾರಿಯಂ ಕಾಯಿಸುತ
ವೈರಿಖರ್ಪರನ ಧೈರ್ಯವನೊಡೆದು ಗೆಲ್ದನಾ
ಧೀರರಿಪುಭೂಪಸಂಹಾರ ಸಿತಕೀರ್ತಿವಿಸ್ತಾರನಾನಂದದಿಂದ ॥ ೯ ॥

[1] ಹೇತಿ (ಗ).

ಚಂಡಲಾಳರ ತುರಗಖುರದಿಂದ ತುಳಿಸಿ ಮಾ
ರ್ಕೊಂಡು ಸಿಂಧುಕ್ಷಿತಿಪನೂರ ದೂಳಿಂ ಪೂಣ್ದು
ದಿಂಡೆಯನೆನಿಪ್ಪ ಮಾಳವನ ಕೋಂಟೆಯ ಕೊಂಡು ಕೂಡೆ ಮಾಳಂ ಮಾಡುತ।
ಅಂಡಲೆದು ಸಿಂಹಳನ ಸರಭಸದ ಸೇನೆಯುಂ
ಮಂಡಲಾಧಿಪ ಕುರಂಗನ ಬಿಲ್ಲ ಬಲ್ಲಹರ
ತಂಡಮಂ ಭಂಗಿಸಿದನಮರನಾಥ ಕ್ಷೋಣಿಪಾಲ ಪರವಿಜಯಲೋಲ ॥ ೧೦ ॥

ಪಲವು ದೇಶಾಧಿಪತಿಗಳನಿಂತು ತನಗೆ ಮಾ
ರ್ಮಲೆತರಂ ಸಂಹರಿಸಿಯವರ ಪುತ್ರರ್ಗೆ ಮಂ
ಗಲರಾಜ್ಯಮಂ ಕೊಟ್ಟು ಕಂಡ ಭೂಮಿಾಶರಂ ಮನ್ನಿಸುತ ಗಜ ತುರಂಗ।
ಲಲಿತಮಣಿವಸ್ತ್ರಧನಕನಕ ವನಿತಾದಿಗಳ
ಸಲೆ ಕಪ್ಪಮಂ ಕೊಂಡು ಬರ್ಪ್ಪ ಕೇರಳನ ಪೆ
ರ್ಬಲದಬ್ಬರಕ್ಕಿದೇನೆಂದು ಮಧುರಾಧೀಶ ವೀರಪಾಂಡ್ಯಂ ಕೇಳಿದಂ ॥ ೧೧ ॥

ಕ್ಷಿತಿಪನೆಲ್ಲಿಯದೆನೆ ವಿಚಾರಿಸುತೆ ಚರರಿಂದೆ
ವಿತರಣಗುಣಾಢ್ಯನೆಂಬಾ ಮಂತ್ರಿ ಜೀಯ ಭೂ
ಪತಿಯಾತನಮರನಾಥಂ ಗಡಾ ಮೂಡಣಿಂ ಬರ್ಪನೆನಲಿಂದ್ರನೆಂದೆ।
ಅತಿಕೋಪದಿಂ ತಿಳಿದು ಮತ್ಪಿತಾಮಹ ಸಚಿವ
ಕೃತಪುಣ್ಯ ಚೊಕ್ಕನಾರಿಂ ಲೋಕವಜ್ರಿಯೆ ಭಂ
ಗಿತನಾದವಂ ದಂಡು ಬಂದನೆ ಹಾಯೆಂದು ಕೋಪಿಸಲ್ಕವನೀಶನು ॥ ೧೨ ॥

ಪರ್ವಿತ್ತು ಪುರದೊಳಗೆ ರಣವಾರ್ತೆ ಭಟನಿಕರ
ವುರ್ವಿತ್ತು ರಥಿಕಸಂಕುಲವಲ್ಲಿ ಮಿಾಸೆಯುಂ
ಚರ್ವಿತ್ತು ವೀರಪಾಂಡ್ಯಕ್ಷಿತೀಶಂ ಭದ್ರಗಜವನಡುರುತ್ತಲುಗುವ।
ಪರ್ವಿತ್ತು ನೇಮಿಸಲ್ಪದರಜಂ ದೆಸೆದೆಸೆಗೆ
ಮರ್ವಿತ್ತು ಪರಕಲಿಸೆ ಚತುರಂಗಸೇನೆ ಮಿಗೆ
ಕೊರ್ವಿತ್ತು ಪಟ್ಟಣಮನಾಗ ಪೊಱಮಟ್ಟು ರಿಪುನೇನೆಗಭಿಮುಖವಾದುದು ॥ ೧೩ ॥

ಕ್ಷೋಣೀಶನಮರನಾಥನ ಪಾಂಡ್ಯಭೂಭುಜರ
ಚೂಣಿ ಗಂಟಿಕ್ಕಿದವು ಬೆರಲ ಬೊಬ್ಬೆಗಳಿಂದೆ
ಕೋಣಹತಿಯಧಿಕ ನಿಸ್ಸಾಳ ಕೋಟಿಗಳ ಧಂದಳರಾವದೇಳ್ಗೆಯಿಂದೆ।
ಮಾಣದೊರಲುವ ಮಿಸುಪ ಬಿಱುಗಾಳಿಯೇಳ್ಗೆಯಿಂ
ಮೇಣಾಲ್ದು ಕೈಮಾಡಿ ಮೂದಲಿಪ ರಭಸದಿಂ
ಬಾಣಬಾಣಂ ತಾಗಿ ಕಿಡಿಗೆದಱುವಳಱಿಂದೆ ತೊಡಗಿತಂತಾ ಕಾಳಗಂ ॥ ೧೪ ॥

ತಿಱ್ಱಿಂದು ತಿರುಗಿ ತುಳಿದವು ಕರಿಗಳಿಱಿದು ಸಱ
ಸಱ್ಱಿಂದು ಸೀಳಿದರು ಪಟುಭಟರು ಕೂಡೆ ದುಱ
ದುಱ್ಱಿಂದು ನೆತ್ತರುಱಿ ಶಾಕಿನಿಗಳಲ್ಲಿ ಬಾಯ್ಗಳನೊಡ್ಡಿ ಬಿಸಿನೆತ್ತರ।
ಜುಱ್ಱಿಂದು ಪೀರಿಯಾನಂದಿಸುತ ನಲಿದು ಘಱ
ಘಱ್ಱಿಂದು ತೇಗಿದುವು,ಬಲುವೆಟಲ್ಗಂಡು ಬಿಱ
ಬಿಱ್ಱಿಂದು ತಾಗಲಗ್ಗಳವೆನಿಸುವಮರನಾಥನ ಬಲೋನ್ನತಿಯ ಕಂಡು ॥ ೧೫ ॥

ಹೊಡೆಯೆ ತಂಬಟವನಾ ರಿಪುಗಳೆದೆಗೂಡಿ ಮು
ತ್ತೊಡೆಯಲವರಬಲೆಯರ ಕಯ್ಯಬಳೆ ಭಾವಿಸ
ಲ್ಕೊಡನೆ ತದ್ವೈರಿಗಳ ನೆತ್ತಿಯಂ ಪೊಯ್ದಾಲ್ದು ಸೀಳಲಾ ತನುವಿನೊಡನೆ।
ಬಿಡೆ ಸೀಳ್ವವಾ ನೃಪರ ಕಾಮಿನಿಯರಿಟ್ಟೋಲೆ
ಪೊಡವಿಪತಿ [1]ಕೇರಳಾಧೀಶಂಗಿದಿರ್ಚೆ ಬಳಿ
ಕೊಡಲಾಂತು ಬಾಳ್ವರಾರೆಂದಂಬರದ[1] ಸುರರು ಭಾಪೆಂದು ಪೊಗಳಲಾಗ ॥ ೧೬ ॥

ಖಣಿಖಟಲನೆಱಗೆ ಭಟಭಟರು ಮದಕರಿಗ
ಳಣೆದು ರಥಿಕರು ರಥಿಕರೆಸಲೆಸಲ್ಕಿಡಿಗೆದಱಿ
ಕಣೆಕಣೆಗಳೇಱಿ ರಾವುತರು ರಾವುತರುಭಯ ಬಲವಲ್ಲಿ ಕಾದುತಿರ್ಪ।
ಭಣಿತೆಯಾ ವೀರ ಪಾಂಡ್ಯನುಮಮರನಾಧ ಧಾ
ರುಣಿಯಾಣ್ಮರಾಡುತಿಪ ಚದುರಂಗವಲಗೆಯಿಾ
ರಣಭೂಮಿಯೆಂಬಂತೆ ಮೆಱೆದುದಾ ವೇಳೆ ಶಾಕಿನಿಡಾಕಿನಿಯರು ಬಾಳೆ ॥ ೧೭ ॥

ಕಂಡದಂ ಕೇರಳಾಧೀಶ್ವರಂ ವೀರದೋ
ರ್ದಂಡನೆಡಬಲದ ಮನ್ನೆಯರ ಮೂದಲಿಸಿ ಮುಂ
ಕೊಂಡು ರಥವೇಱಿ ಸನ್ನಾಹ ನಿಸ್ಸಾಳದ ಧ್ವನಿ ಧಾಂಧಳೆಂದುಲಿಯಲು।
ಖಂಡೆಯವನಾಂತು ನಡೆವಲ್ಲಿ ತಮ್ಮನ್ವಯದ
ಮಂಡನದ ಬಿರುದಿನಗ್ಗದ ರೆಕ್ಕೆಯಂ ಪೊಡೆವ
ಡಿಂಡಿಮದೊಳೆತ್ತಿ ಪಾಂಡ್ಯನ ಮಂತ್ರಿ ನೋಡಿ ಬೆಱಗಾಗಿ ಪತಿಗಿಂತೆಂದನು ॥ ೧೮ ॥

ಜೀಯ ಬಿನ್ನಪವೀತನಾ ಸ್ವರ್ಗದಧಿಪನೆನಿ
ಪಾಯಮರನಾಥನಲ್ತಿಳೆಯಲ್ಲಿ ಕೇರಳದ
ರಾಯನಪ್ಪಮರನಾಥಂ ಬಂದನವರ ಬಿರುದಿನ ಕೇತನಂ ತಪ್ಪದು।
ನ್ಯಾಯವಲ್ಲೆಮ್ಮ ವೀರವನಲ್ಲಿ ತೋಱುವುದು
ಪಾಯದಿಂ ಬೆಂಗೊಡುವೊಡೆಮ್ಮ ಬೀಯಗರೆನು
ತ್ತೋಯಾರದಿಂ ಮಂತ್ರಿ ವೇಳೆ ಪಾಂಡ್ಯಂ ತೆಗೆದು ಬಂದೂರನೊಳಪೊಕ್ಕನು ॥ ೧೯ ॥

---

[1] ಕೇರಳಾಧೀಶಂಗೆ ಮಾರಾಂತು। ಪೊಡಲನಿಡುವವರಾರೆನುತ್ತಂಬರದ (ಗ).

ಮತ್ತೆಯಾ ಕೇರಳಾಧೀಶ್ವರಂ ಮಧುರೆಯಂ
ಮುತ್ತಿಗೆಯ ಮಾಡುವೆನೆನುತ್ತಿಪ್ಪ ಕಾಲದೊಳ
ಗಿತ್ತಲಾ ವೀರ ಪಾಂಡ್ಯಾವನೀಶನ ಮಂತ್ರಿ ವಿತರಣ ಗುಣಾಢ್ಯನೆನಿಪ ।
ಉತ್ತಮಂ ನಿಜಪತಿಗೆ ಬಿನ್ನೈಸಿದಂ ಜೀಯ
ಮತ್ತೊಬ್ಬ ರಾಯನೇ ಎಮ್ಮ ಬೀಯ್ಯಗರಲಾ
ಇತ್ತು ಪೆಣ್ಮಣಿಯನೊಲ್ದಮರನಾಥನ ಕೂಡೆ ಬಾಳ್ವುದೇ ಕಜ್ಜವೆಂದ ॥ ೨೦ ॥

ಅದನೊಡಂಬಟ್ಟು ಪೋಗೆನೆ ಮಂತ್ರಿ ಭೂಮಿಶ
ಗಿದಿರುವಂದಷ್ಟಾಂಗದಿಂ ನಮಿಸಿ ಕೈಮುಗಿದು
ಪದೆದು ಬಿನ್ನೈಸಿದಂ ಜೀಯ ದಿವಿಯಮರನಾಥಂ ಬಂದನೆಂದು ಪೊಣರ್ದು ।
ಮೊದಲನ್ವಯದ ರೆಕ್ಕೆಯಂಗಾಣುತಂ ನಿಮ್ಮ
ಪದಕಳ್ಕಿಬಂದೆವದಱಿಂ ನಿಮಗೆ ಪೆಣ್ಣಿತ್ತು
ಮುದದಿಂದ ಬಾಳ್ವೆವೆನಲೀತನಾರೆನಲರಸಿನೊಳಗವರ ಸಚಿವನೆಂದಂ ॥ ೨೧ ॥

ಹರಕುಮಾರಕನೇ ತಿರುಜ್ಞಾನಸಂಬಂಧಿ
ಗುರುವಾಗಿ ಬಹುಮಹಿಮೆಯಂ [1]ಮೆಱೆವುತಿವರ ಹಿರಿ
ಯರಸನ ರುಜಾದಿಗಳ[1] ಬಿಡಿಸಿ ಸೌಂದರ ಪಾಂಡ್ಯನೆನಿಸಿ ಪೋಲ್ತುಪಲಾಪಿಪ ।
ದುರುಳ ಜೈನರ್ಗೆ ಶೂಲಂಗಳಂ ಮಂಗಯ
ಕ್ಕರಸಿಯರೊಳಾ ಕುಲಚ್ಚಱೆಯನುಱೆ ಬಳುವಲಿಯ
ಬರುತ ವಾಯ್ಲಾರಿಂದೆ ಮಾಡಿಸಿದೊಡಲ್ಲಿ ತೆಗೆಸಿದನವರನಾಚಾರ್ಯನು ॥ ೨೨ ॥

ಆ ಕ್ಷಣದೊಳಾ ಕುಲಚ್ಚಱೆಯರಾ ನಿರ್ವಾಣ
ದೀಕ್ಷೆಯಂ ಗುರುವಿಂದ ಕೊಂಡು ತಪವಿರಲು ಬಳಿ
ಕೀ ಕ್ಷಿತಿಯ ರಾಯರಾಯರು ನಮಿಸುತಿರೆ ಶಿವಪ್ರಿಯನಾಚಿ ಭಜಿಸಿ ಬೇಡಿ ।
ತ್ರ್ಯಕ್ಷನೇ ಪತಿಯಾಗಬೇಕೆಂದಿರಲ್ಕವಳ
ನೀಕ್ಷಿಸಿ ತದಾಲಯಕ್ಕೆಯ್ದಿ ಯೋಚಿಸಿದನಾ
ಮೋಕ್ಷವಲ್ಲಭನಧಿಕಯವ್ವನದೊಳಮರವಧುಗೆಣೆಯಪ್ಪರಂ ಬಿಟ್ಟನು ॥ ೨೩ ॥

ಈ ವೃದ್ಧಭಾವದೊಳಗಿದು ನಮ್ಮ ಶಿವಲಿಂಗ
ದೇವರಾಟವೆನುತ್ತಲಿರಿಸಿ ಮಂಚದೊಳು ಸ
ದ್ಭಾವಿ ಪೊಱಮಡೆ ಕೋಟಿಕಂದರ್ಪರಂ ಗೆಲ್ವ ರೂಪಿನಿಂದಾ ಲಿಂಗವು ।
ಓವಿಯಾಲಿಂಗನಾದಿಯ ಕೃತ್ಯಮಂ ನೆಗಳೆ
ಯಾವುದಯ ಕಾಲದೊಳು ಕರೆದನೆಲೆ ಶಂಕರಾ
ನೀವು ಚಿತ್ತೈಸಿ ಪೂಜೆಯ ಮಾಡಬೇಕೆಂದನಾ ಕುಲಚ್ಚಱೆಯನಲ್ಲಿ ॥ ೨೪ ॥

1 ಮೆಱೆವುತಿರಲಿಂತು । ಹಿರಿಯರಸನುಜಾದಿಗಳ (ಗ).

ಕರೆವುತಿರ್ದಪನೆಮ್ಮ ಭಕ್ತನೆಂದೇಳಲಾ
ತರುಣಿ ಚೆನ್ನಾಯ್ತು ನೀನೆಂತುಪೋದಪೆ ಎನ್ನ
ಪುರುಷನೆಂದೇಳಲೀಯದೊಡೆ ಮತ್ತಂ ನುಡಿದನಂ ಮನಂ ಬಿಟ್ಟು ನೀವು ।
ಬರಲಾಱರೋ ಶಕ್ತಿಯುತಲಿಂಗ ಭಜಕರಿ
ರ್ವರ ಕೂಟದೆಡೆಗೆ ಸಂಶಯವೇಕೆನುತ್ತ ಹೋ
ಶರಣಾರ್ತಿಯೆನುತಲೊಳಪೊಕ್ಕುಬಂದಂ ಕುಲಚ್ಛಱಿಯನಾನಂದದಿಂದ || ೨೫ ||

ಖಂಡಶಶಿಮೌಲಿ ಬಹು[1]ದೆಂದಾ ಸೆಱಂಗ ಪಿಡಿ[1]
ಕೊಂಡಡೆಮ್ಮಂ ನುಡಿದಳೆಲೆಯಯ್ಯ ನೀನಾರ
ಗಂಡನಂ ಲೂಟಿಯಾಡಲ್ಬಂದೆ ಎಂದು ಚೇಲಾಗ್ರಮಂ ಪಿಡಿದೆಳೆಯಲು ।
ಪುಂಡರೀಕಾಕ್ಷಿ ಶಿವನತ್ತ ಬಿಡ್ದಂ ಪಿಡಿದು
ಕೊಂಡು ಭಕ್ತಂ ಜಡಿದೊಡಿತ್ತ ಜೋಲ್ವಂ ಶಂಭು
ಭಂಡಾರನಳ್ಕಿಗೊಡರಿಸಲಿಂತುಟಾಯ್ತು ನಿಜ ಸಂಸಾರಿಗಳಿಗೆಂತುಟೊ || ೨೬ ||

[2]ಏಣಲಾಂಛನ[2]ಧರಂ ಲಿಂಗವಾಗುತ್ತಿರಲು
ಕಾಣುತಂ ಪ್ರಮಥಗಣ ರುದ್ರಗಣ ಸಂದೋಹ
ದಾಣೆಯೆ ನಲಿದು ತಿಲ್ಲಮೂ[3]ವಾಯಿಲರ[3] ಬಳಿಯೊಳಲ್ಲದೆ ತೀರದೆಂದು ।
ಜಾಣೆಯಾ ಭಕ್ತರಿದ್ದೆಸೆಯೊಳ್ಸೆಱಂಗುಗಳ
ಪಾಣಿಯಿಂ ಪಿಡಿದು ಬರಲೆಲ್ಲಾ ಗಣಂಗಳ
ಕ್ಷೀಣರನಿಬರ ನೋಡಿ ಬೆಸಗೊಳುತ್ತಿರ್ದರೊಡವಂದ ಮಾಹೇಶ್ವರರನು || ೨೭ ||

ಬಹಳವೃದ್ಧನಿದಾರ್ಕುಲಚ್ಛಱಿಯನಿವಳಾರು
ಸಹಜೆ ಎನಿಸುವ ಶಿವಪ್ರಿಯನಾಚಿ ನಡುವೆ ದಂ
ತಹತಿ ನಖರೇಖೆಗಳ ಖಂಡಜಂಗಮವಾರು ತಾನೆ ಪೊನ್ನಾಂಬಲೇಶಂ ।
ಎಹಗಿವರ ಲಿಂಗದೇವಂ ಸತಿಯ ವರಿಸಿದಂ
ಅಹಹ ಹಿರಿಯರು ನಿಮಗಿದೇಂ(?)ಸಲ್ಪುದೇಯೆನಲು
ಬಹವದಕೆ ನೇರ್ ನ್ಯಾಯಮಂ ಪೇಳ ನೀವೆನುತ್ತ ಹಸ್ತವನಲುಗಿದಂ (?) || ೨೮ ||

ನೆಟ್ಟನೆಲ್ಲಾ ಗಣಂಗಳು ಕೇಳಲೆನ್ನಸುವ
ಬಿಟ್ಟಲ್ಲದೇ ಸೆಱಂಗಂ ಬಿಡುವಳಲ್ಲೆನಲು
ನಿಟ್ಟಿಸುತ್ತೊಡೆಯರೇ ನಿಮಗೆಂತುಟೆನಲಿರುಳು ಗಂಡನಂ ಮಾಡಿಕೊಂಡ ।
ದಿಟ್ಟೆಗಂತುಟು ಗಂಡಯೆನಗೆಂತು ಪೇಳಿಮೆನೆ
ಯಟ್ಟಹಾಸದೊಳು ತೊಲಗಿಸುತವರ ತಾವೊಡಂ
ಬಟ್ಟಾಣೆಬರವಂ ಕೊಡೆಂದು ಕರೆದಾಡಲಾ ಸತಿ ನುಡಿದಳಾ ಸಭೆಯೊಳು || ೨೯ ||

---

[1] ಧೆಂದು ಸೆಱಗಂ ಪಿಡಿದು (ಗ) [2] ಏಣಲೋಚನ (ಗ) [3] ವಾಯಿದರ (ಕ)

ಕೊಡೆನೆಂಬೆನೇ ಕೊಟ್ಟಪೆಂ ಗಂಡನೊಬ್ಬನಂ
ಬಿಡಿಯೆಂಬ ಮಾತೊಂದ ಕೇಳಿನಿನ್ನುಳಿದುದಂ
ನುಡಿವುದೆನೆ ಲಿಂಗವಂ ಪಿಂಗೆನೆನಲಾಯುಯ್ಯನೆಲ್ಲರೀಕ್ಷಿಸುತಿರ್ದರ।
ನಡುವಿರ್ದ ಹಿರಿಯರೇ ನಿಮ್ಮ ಬಗೆಯೇನೆನಲ್
ಮಡದಿಗಾದರೆ ಗಂಡನೀತಂಗೆ ದೇವರಿ
ಕ್ಕಡೆಯೊಳಿಮಗಂ ಲೇಸೆನಲ್ ಕೇಳಿ ಕೂಡೆ ಗೊಳ್ಳನೆ ನಕ್ಕರಾ ಶರಣರು ‖ ೩೦ ‖

ಎಲೆಯಮ್ಮ ನಿಮ್ಮಿಷ್ಟವಾವುದೆನೆ ಹಗಲು ನಿ
ರ್ಮಲ ಶರಣ ಸೇವೆಯಿರುಳಿ ಪುರುಷ ಕೇಳಿಯೆ
ಸಲೆಲೇಸು ಲೇಸೆನಲ್ಕೊಡೆಯರೇ ನಿಮಗೆಂತುಟೆನೆ ದಿವದೊಳೀಶಪೂಜೆ।
ಒಲಿದಿರುಳು ಜಪವೆನಲು ವೆಳಕು ಹರಿಯಿತ್ತಿರುಳು
ಲಲನೆಗಾಳ್ಕಂ ಹಗಲೊಳಯ್ಯಂಗೆ ಲಿಂಗವೆಂ
ದೊಲವಿನಿಂ ನ್ಯಾಯಮಂ ತಿರ್ದಿಯವರಾಣೆಯಂ ಬಿಡಿಸಿ ಬೀಳ್ಕೊಟ್ಟರೊಲವಿಂ ‖ ೩೧ ‖

ಶ್ರೀಕರತಿರುಜ್ಞಾನಸಂಬಂಧಿಯೊಳು ಶಿವನ
ಲೋಕಕೆಯ್ದಿದ ಕುಲಚ್ಚೆಱೆಯರ ಕುಮಾರನೆ
ಲ್ಲಾಕಳಾಕುಶಲನೀ ವಿತರಣಗುಣಾಢ್ಯ ಮಂತ್ರೀಶನೆಂದಮರನಾಥ।
ಭೂಕಾಂತನೊಡನಾ ವಿಚಾರಪರ ಸಚಿವಂ ವಿ
ವೇಕದಿಂ ಪೇಳಿ ಪಾಂಡ್ಯಂ ಸೌಂದರಾಂಗಿಯೆಂ
ಬಾ ಕುವರಿಯಂ ಕೊಟ್ಟಪಂ ಗಡಾ ಜೀಯಯೆನಲೆಂದನಾ ಧರಣೀಶನು ‖ ೩೨ ‖

ಚೇರಮಂಗಾ ಪೆಣ್ಣ ಕೈಕೊಂಡೆವೆಂದಲ್ಲಿ
ಕೇರಳಾಧೀಶ್ವರಂ ಬರವೇಳ್ದನೆಂದೊಡಾ
ವೀರಪಾಂಡ್ಯಂ ಸಂಭ್ರಮದೆ ಬಂದು ವಂದಿಸುತಿರಲ್ಕೆದ್ದು ತರ್ಕೈಸುತ।
ಊರಪೊಗವೇಳ್ಕೆಂದವಂ ಬಿನ್ನವಿಸಲೊಪ್ಪಿ
ಯಾರಾಯರೇಳ್ವಲ್ಲಿ ಘಮ್ಮನೆಯ್ತಂದುದಾ
ಮಾರಾರಿ ತಿರುವಂಜಕಳನಾಥದೇವರುತ್ಸವದಾ ಪ್ರಸಾದಮುದ್ರೆ ‖ ೩೩ ‖

ಶ್ರೀಮುಖಂ ಬರೆ ಕಾಣುತಿದಿರೆದ್ದಮರನಾಥ
ಭೂಮಿಪಂ ನೆರೆದ ದೊರೆಗಳು ಸಹಿತ ಭಕ್ತಿಯಿಂ
ದೀ ಮಹಿಯೊಳಷ್ಟಾಂಗದಂಡಪ್ರಣಾಮಮಂ ಮಾಡಿ ವಂದಿಸುತ ನೋಡಿ।
ಸ್ವಾಮಿಯ ನಿರೂಪಪ್ರಸಾದಮುದ್ರೆಗೆ ಹಸ್ತ
ತಾಮರಸವಾಂತು ಮಸ್ತಕದ ಮೇಲಿಟ್ಟುಕೊಂ
ಡಾ ಮಹಾದೇವನುತ್ತಮರಾಯಸವನೋದಿಕೊಂಡನಾನಂದದಿಂದೆ ‖ ೩೪ ‖

ಸ್ವಸ್ತಿ ಸುಶ್ರೀಮದಖಿಲಾಜಾಂಡಗರ್ಭವಿ
ನ್ಯಸ್ತ ಹರಿಯಜಶಕ್ರಮಣಿಮುಕುಟಭಾಸುರಗ
ಭಸ್ತಿ ಪದಪಂಕೇಜ ತಿರುವಂಜಕಳನಾಥದೇವರೆಮ್ಮಯ ಕರುಣದ ।
ಪ್ರಸ್ತುತದ ಮಗನೆನಿಸುವಮರನಾಥಕ್ಷಿತಿಪ
ಗಾಸ್ತಿಕ್ಯಭಾವದಿಂ ಕಳುಪಿದಾಶೀರ್ವಾದ
ದುಸ್ತಮೋನಾಶ ಮದ್ರಥಮುಹೋತ್ಸಹಕೇಕ್ಷಣಂ ಬರ್ಪುದೆಂದಿರಲ್ಕೆ ॥ ೩೫ ॥

ಓದಿಕೊಂಡಾ ಶಿವನಿರೂಪಮುಂ ಭೂಪನ
ತ್ಯಾದರದಿ ವೀರಪಾಂಡ್ಯಾಧೀಶನೊಡನೆ ಸ
ಮ್ಮೋದದಿಂದಿಂತೆಂದನೀಶನಾಣತಿಗಂಡಬಳಿಕವಾಚಮನವಾದಿ- ।
ಯಾದವಂ ನೆಗಳಲಿಲ್ಲೆಂದಾತನೊಡನೆ ಸಂ
ಪಾದಿಸಿ ವಿಚಾರವರಮಂತ್ರಿಯುಂ ಕಳುಪಿಯಾ
ಹ್ಲಾದದಿಂದಮರನಾಥಂ ತೆರಳಿ ನಿಜಪುರಿಗೆ ಬರುತಿರ್ದನೇಳ್ಗೆಯಿಂದೆ ॥ ೩೬ ॥

ಬಳವಂತನಧಿಕ ವೈಭವದಿಂದೆ ತಿರುವಂಜ
ಕಳನಾಥನಧಿಕಗೋಪುರವನೀಕ್ಷಿಸುತ ಮುಂ
ದಿಳಿದು ರಥದಿಂದೆ ಪೊಡಮಡುತಲಡಿಗಡಿಗೆಯುಂತಾ ಶಿವಾಲಯಮನಲ್ಲಿ ।
ಒಳಪೊಕ್ಕು ಸಾಷ್ಟಾಂಗದಂಡಪ್ರಣಾಮಮುಮ
ನಿಳೆಯಾಣ್ಮನೆಸಗಿಯಾಂ ನಿಮ್ಮ ಸೇವೆಯ ಕೂರ್ತು
ಘಳಿಲನೆಯ್ತಂದನೆಂದಲ್ಲಿ ಬಿನ್ನೈಸಿ ತೊಡಗಿದನೀಶನುತ್ಸಹವನು ॥ ೩೭ ॥

ಸಿರಿಕುಡಿಯನೆಸಗಿಯೆಣ್ದೆಸೆಯಿಂದ ಬರುತಿರ್ಪ
ಪರಿಷಜ್ಜನಂಗಳ್ಗೆ ಸಕಲಸಂತೋಷಮುಂ
ಪರುರವಿಸಿ ಮಾನ್ಯರಂ ಸತ್ಕರಿಸಿ ಕಾಣಿಸಿಕೊಳುತ್ತ ದೇಶಾಧೀಶರ ।
ಪರಮಸಂಭ್ರಮದಿಂ ರಥೋತ್ಸಾಹದಿಂ ಲೋಕ
ವರಿದೆನಲು ಮಾಡಿ ಸುಖದಿಂದಿರ್ದನಾ ಮಹೇ
ಶ್ವರ ಪುತ್ರನುತ್ತಮಚರಿತ್ರನೆನಿಪಮರನಾಥಸ್ತೋತ್ರಪಾತ್ರಗಾತ್ರ ॥ ೩೮ ॥

ಜೊನ್ನೊಡಲ್ಗೊಳರೆಱೆಯುಂ ಚೌವೊಗಂ ಮಿಸುಪ
ಮುನ್ನೀರ್ಮಗಳ ಗಂಡನೆಱಗುವೀರಡಿಯ ಕಡು
ಚೆನ್ನಿಗಂಗಾ ಗಾಳಿಗೆಳೆಯನೊಳಚ್ಚೆಯಿಂ ಮೆಯಿಮುಗನ ಚುರ್ಚಿದಂಗೆ ।
ಬನ್ನಂಬಡಿಸಿ ನಾಡೆ ಬಲ್ಗಯ್ಯ ರಕ್ಕಸರ
ಪನ್ನತಿಕೆಯುಂ ಕೆಡಿಸಿ ಮುಪ್ಪೊಳಲ್ಗೊಂಡವಂ
ಗೆನ್ನಾಳ್ದ ಭೋಗಮಲ್ಲೇಶಂಗುಮೇಶಂಗೆ ಮನಮೊಗ್ಗಿ ತುಳಿಲ್ಗೆಯ್ವೆನು ॥ ೩೯ ॥

ಇದು ಸಕಲ ಭಕ್ತಪದಪದ್ಮ ಮಧುಕರ ಪುಣ್ಯ
ಸದನ ಗುಬ್ಬಿಯ ಮಲ್ಲಣಾರ್ಯರ ಕೃಪಾಪಾತ್ರ
ಮುದಿತ ನವರಸ ಭಾವ ಲಕ್ಷಣಾಲಂಕಾರ ನಿಪುಣನೆಂದೆನಿಸಿ ಮೆಱೆವ |
ಚದುರಚೇರಮನೊರೆದ ಚೇರಮ ಚರಿತ್ರಮಂ
ಪದಪಿಂದ ಬರೆದೋದಿ ಕೇಳಿ ವಿಸ್ತರಿಸುವ
ರ್ಗೊದಗಿಪ್ಪುದಾಯುರಾರೋಗ್ಯಸಂಪದ ಸರ್ವಸಿದ್ಧಿ ಸತ್ಯಂ ತಥ್ಯವು || ೪೦ ||



# ಐದನೆಯ ಸಂಧಿ

**ಸೂಚನೆ :**

ಸೌಂದರಾಂಗಿಯ ಕೇರಳನ ಸಿಂಗರಂಗಳಾ
ನಂದಮಂ ಮಧುರೆಯಂ ವೈಭವದಿ ಪೊಕ್ಕು ನಲ
ವಿಂದಾದ ಮದುವೆಯುತ್ಸಾಹಮಂ ಕುಡುಗುಲೂರ್ಗಂ ತಿರುಗಿದುದನೊರೆವೆನು ||

ಬೆಟ್ಟಿಱಿಯನೊಡಲೊಳಗೆ ಹುಟ್ಟಿದುವೆ ಮೆಯಿಗಾಂತಿ
ನಿಟ್ಟಿಸಲ್ಕೊಳನೊಳಡಸಿರ್ದ ಜಲವಾ ಕಾಂತೆ
ಯಿಟ್ಟೆಡೆಯ ಮೊಲೆ ಮೊಗಂ ಕೈಕಾಲ್ಗಳೊಳ್ಪಚ್ಚೆ ಮೇಣೊಗೆದ ನೀರ್ವೂಗಳು |
ನೆಟ್ಟನಾ ತಾಣದೊಳು ವಿಹರಿಸುತ ನಲ್ಮೆಯಿಂ
ದಟ್ಟಡಿಯಿಡುವ ರಾಜಹಂಸಂಗಳನೆ ಸೊಗಸು
ವಟ್ಟ ಮದ್ವರ ಭೋಗಮಲ್ಲನರ್ಕೇಂದುನೇತ್ರಂಗಳಿಳೆಯಂ ಸಲಹಲಿ ||೧||

ಇಂತಭವನುತ್ಸಾಹಮಂ ನೆಗಳಿಯುಮರನಾ
ಥಂ ತಳ್ತು ಸುಖದೊಳಿರೆ ಮಂತ್ರಿ ಮಧುರೆಯ ಪೊಕ್ಕು
ತಾಂ ತಿರುಗಿ ಬಂದರಸನಗೆಱಗಿ ಬಿನ್ನೈಸಿದಂ ಪಾಂಡ್ಯನೃಪ ಸತ್ಕಾರಮಂ |
ಅಂತಾತನಣುಗಿ ಶಿವನರರೆ ಪಿತನಾಮುದಿಂ
ಸಂತಸದೊಳೆಸೆದಿರ್ಪ ಸೌಂದರಾಂಗಿಯ ಚೆಲ್ವ
ಕಾಂತಾಶಿರೋಮಣಿಯ ಲಕ್ಷಣೋನ್ನತಿಗಳನದೇನೆಂಬೆನತಿಸೌಖ್ಯಮಂ ||೨||

ಬಿಂಬಿಸುತ್ತಿಳೆಯ ನೋಂಕುವ ಕಿಱುವೆರಲು ರೋಮ
ವಿಂಬುಗೊಳದಿಹ ಜಂಘೆ ಕೋಮಲಾಂಗಂ ಸುಚಂ
ದ್ರಂಬೋಲ್ತು ರಾಜಿಪ ಮುಖಂ ಮಿಸುಗುವರುಣರೇಖೆಯನಾಂತ ಕಡೆಗಂಗಳ |
ತುಂಬಿಗುರುಳಾ ಹಸ್ತಪಾದಂಗಳೊಳು ತೋಱು
ವಂಬುಜಾಂಕುಶ ಶಂಖವಾ ಧ್ವಜಂ ನಿಷ್ಕಾಂಕ
ವೆಂಬ ರೇಖೆಯನುಳ್ಳ ಸಾಮುದ್ರಿಕದ ಲಕ್ಷಣದ ಕುವರಿ ರಾಜಿಸಿದಳು ||೩||

ಪರಕಲಿಪ ಪವಳವಾವೆಗಳು ಮೀನ್ಪೆರ್ದೆರೆಯ
ಪೊರಳಿ ಮಳಲ್ದಿಂಟೆ ಸುಳಿ ಪೊಣರ್ವಕ್ಕಿ ನೀರ್ದೆರೆಗ
ಳುರು ಶಂಖ ಕಮಲಕುಮುದಾರ್ಧಚಂದ್ರಾಳಿಯಳಕಾಳಿಕಾಕ್ಷ್ಯಾಸ್ಯಕಂಠ |
ಕರ ಕುಚೋನ್ನತಿ ನಾಭಿ ಜಘನೋರು ಜಂಘಾಗ್ರ
ಚರಣಾಂಗುಲಿಗಳಾದ ಸಾಮುದ್ರ ಲಕ್ಷಣದ
ವರಸೌಂದರಾಂಗಿಯಂ ಕೊಂಡಾಡಲೆನ್ನಳವೆ ಜೀಯ ಚಿತ್ತೈಸೆಂದನು ||೪||

ತರುಣಿಯವಗುಣವನೀಕ್ಷಿಸಿಯನುಜಗಂ ತನ್ನ
ಸಿರಿಯ ಪಟ್ಟಂಗಟ್ಟಿ ಸಿಂಗರಂ ವರನೀತಿ
ಪರಮವೈರಾಗ್ಯಂಗಳಂ ಪೇಳಿ ಭೃತ್ಯರುಪಹತಿಯ ಮಾಡಲ್ಕಱುಪದೆ ।
ಧರಣೀಸುರಂ ಪರೀಕ್ಷಿಸೆ ವಿಕ್ರಮಾಂಕನಂ
ಬರಿಸಿ[1]ದಾ ಭರ್ತೃಹರಿಯುಂಟುಮಾಡಿದ ಸೌಖ್ಯ
ತರದ ಸಾಮುದ್ರಿಕಂ ತಪ್ಪದೊಪ್ಪುವ ರಾಜಪುತ್ರಿ ರಾಜಿಪ[1]ಳೆಂದನು ॥ ೫ ॥

ಸರವಣಿಗನುಱ ಕರ್ದುಂಕದ ತಳಿರದೆಲರ್ದಿನಿಗ
ನುರವಣಿಸಿ ಪಿಡಿಯದಿಹ ಜೊನ್ನೊಡಲ್ಗಱುಮುಟ್ಟ
ದರಲಂಬು ರಾಯುಂಚಿ ಮೊಗವಿಡದ ಚೆಲ್ವಿನ ಮೃಣಾಳವಾ ಮುಯ್ಯಾರಡಿ ।
ಮೊರೆದೆಱಂಗದ ಸೌಸವದ ಪೂ ವಿರಳವಿಲ್ಲ
ದುರುಮೌಕ್ತಿಕಕ್ಕೆ ವಾಸಟಿಯಾದ ಕನ್ನೆಯಂ
ಧರಣಿಗುಱ ಚೆನ್ನೆಯಂ ಕುವರಗೆಂದೊಪ್ಪಿ ವೀಳೆಯವಿತ್ತು ಬಂದೆವೆಂದಂ ॥ ೬ ॥

ಒಸೆದೊಪ್ಪಿಯರಸಿದಿರ್ಗೊಂಬ ರಾಜಂಗೆ ಪೊಂ
ಬಸುಱ ಬಲ್ಲಹಗೆ ಪಾಸಟಿಯಪ್ಪ ಜಾಣ ಜೋ
ಯಿಸರಿಂದೆ ನಿಶ್ಚೈಸಿ ಶುಭಲಗ್ನಮಂ ಮಂತ್ರಿವರ್ಯಂಗೆ ನೇಮಿಸಿದೊಡೆ ।
ದೆಸೆದೆಸೆಯ ರಾಯರಂ ಮಂಗಲದ್ರವ್ಯಂಗ
ಳೊಸಗೆ ಸಹಿತಂ ಕರೆಸಿ ವಿಶ್ವಕರ್ಮನ ಪೋಲ್ವ
ರಸಿಕಶಿಲ್ಪಜ್ಞರಿಂ ಮಾಡಿಸಿದ ವೈವಾಹಮಂಟಪವನೇಂ ವಣ್ಣಿಪೆಂ ॥ ೭ ॥

ಲಾಲಿತ ಗಜಾವಳಿಯ ರುದ್ರನೇತ್ರಾವಳಿ ವಿ
ಶಾಲ ದಂಡಾವಳಿಯ ಮನುಜಾವಳಿಯ ಸುಖದ
ಮೂಲವಹ ಮಣಿಪಟ್ಟಿಗಳ ಮೃಗಾವಳಿಯ ತುರುಗಾವಳಿಯ ವೃಷಭಾವಳಿ ।
ಶ್ರೀಲಲಿತ ಮೇಘವಣ್ಣಿಗೆಯ ವಸ್ತ್ರಾವಳಿಯ
ಸಾಲಪ್ಪ ಮೇಲ್ಕಟ್ಟನೊಡರಿಚಿ ನೆಲಂ ಮೆಚ್ಚೆ
ಲೋಲಾಕ್ಷಿಯರ ವೃಂದದಿಂದಲಾ ಕಾವಣಂ ಮೆಱೆಯಿತ್ತು ಹೃದ್ರಾವಣಂ ॥ ೮ ॥

ಈಪರಿ ವಿವಾಹಮಂಟಪ ಸರ್ವಸಂಭ್ರಮವ
ನೋಪ ಕೇರಳನಾಥನೊಡರಿಚುತ ಕೂರ್ತು ಮಧು
ರಾಪಟ್ಟಣಕ್ಕೆ ಶುಭಲಗ್ನಮಂ ಕಲ್ಪಿಸುತೆ ಮುಖ್ಯಮಾನಸರ ಕಳುಪೆ ।
ಭೂಪರ ಶಿರೋರತ್ನವಹ ವೀರಪಾಂಡ್ಯಕ್ಷಿ
ತೀಪಾಲನಾಪ್ತಮಂತ್ರಿಗೆ ನಿರವಿಸಲ್ಕೆ ಮ
ತ್ತಾ ಪುರಂ ನೆಱೆಮೆಱೆದುದದಱ ಸಿಂಗರವನಿನ್ನಾವ ಕವಿ ಬಣ್ಣಿಸುವನು ॥ ೯ ॥

---
[1] ಸಾಮುದ್ರಿಕಂ ತಪ್ಪದೆಂದಾ ಭರ್ತೃಹರಿಯುಂಟುಮಾಡಿರ್ದ ಲಕ್ಷಣೋತ್ತಮ ರಾಜಪುತ್ರಿಯೊಪ್ಪುವ (ಗ)

ಕೇರಿಕೇರಿಗಳಲ್ಲಿ ಸಮ್ಮಾರ್ಜಿಸುತ್ತ ಕ
ಸ್ತೂರಿಗಳ ಸಾರಣೆಯ ಮುತ್ತುಗಡೆಗಳ ಮಕರ
ತೋರಣಂಗಳ ಮುಕುರತೋರಣಂಗಳ ಕನಕತೋರಣಂಗಳ ರನ್ನದ ।
ತೋರಣಂಗಳ ಫಳಾವಳಿಯ ಮೇಲ್ಕಟ್ಟುಗಳ
ಚಾರುತರಮಪ್ಪ ಹರ್ಮ್ಯಂಗಳಂ ಸಿಂಗರಿಸ
ಲಾ ರಾಜಧಾನಿ ಮೆಱೆದತ್ತು ಬುಧಸನ್ಮಾನಿ ಸಕಲವನಿತಾ ವಿತಾನಿ ॥ ೧೦ ॥

ಪುಟಭೇದನದ ಸೊಬಗು ಮೆಱೆಯಲಾ ಭೂಪನು
ತ್ಕಟದ ಮಂದಿರದ ವೈವಾಹಮಂಟಪವೆಸೆವ
ಪಟಿಕದಿಂ ಸವೆದ ನೆಲಕಟ್ಟಲ್ಲಿ ರನ್ನಗಂಭಂ ಸಾಸಿರಂಗಳಿರ್ಪ ।
ನಟನೆಯೆಂತೆನೆ ಫಣೀಶನ ಪೆಡೆವರಲ್ಗದಿರು
ತಟವಾಯ್ದು ಮೇಲೆ ತೋರ್ಪಂತೆ ರಾರಾಜಿಸಿತು
ಚಟುಲನೇತ್ರೆಯರ ಸಂದಣಿಯಿಂದೆಯುತ್ಸವಿಪ ಜನ ಮನೋಹರದೊಳೊಂದೆ ॥ ೧೧ ॥

ನಡುಚವುಕಿಗೆಗೆ ಬಿಗಿದ ತೊಲೆಯ ಪೊಱವಳಸಿನು
ಗ್ಗಡದ ನಾನಾವರ್ಣಚಿತ್ರಪತ್ರಿಕೆಗಳಂ
ಹೆಡಗಿಚಿದ ತನ್ನ ಸುತ್ತಿದ ಪಳುಕುವಿತ್ತಿಯೊಳು ಮಾರ್ಪೊಳೆಯಲಲ್ಲಿ ಬೇಱೆ ।
ಪಿಡಿದು ಲೆಕ್ಕಣಿಕೆಯಿಂ ಬರೆಯಲಿಲ್ಲದೆಯದಱ
ಪಡಿಯಾಗಿ ರಾಜಿಸಿದುದೆನೆ ಪೊಗಳಲಳವೆ ಧರೆ
ಯೊಡೆಯನಣುಗನ ವಿವಾಹದ ನವ್ಯಗೇಹಮಂ ಸಂತಸದ ಸಂದೋಹಮಂ ॥ ೧೨ ॥

ಓವಿ ಪದ್ಮಾವಳಿಯ ಪತ್ರಾವಳಿಯ ಸುಕುಮು
ದಾವಳಿಯ ಹಂಸಾವಳಿಯ ಚೆಲ್ವನಪ್ಪ ಮ
ತ್ಸ್ಯಾವಳಿಯ ಮಕರಾವಳಿಯ ಮಿಸುಪ ಬೆಳ್ಪಟ್ಟೆಗಳೊಳಮರ್ದ ಮೇಲ್ಕಟ್ಟನ ।
ಆ ವರ್ಣವಾ ಹೊಳೆವ ಕುಟ್ಟಿಮದೊಳಂ ತೋಱೆ
ತೀವಿರ್ದ ಕೊಳನೆಂದು ಬಂದೆಱಗಿ ನಗಿಸಿದವು
ಭಾವಕಿಯರಂ ತುಂಬಿವಿಂಡೆಂದೊಡಳಿಯಾಸೆಯಿಂದಾರು ಲಜ್ಜೆಗೆಡರು ॥ ೧೩ ॥

ಒಸಗೆವಂದರದ ಮೇಲ್ಕಟ್ಟಂಬರಂ ಮಿಸುನಿ
ವಸೆಯ ಮಂಟಪವೆ ಕನಕಾಚಲಂ ತತ್ಕಳಶ
ವೆಸೆವ ರವಿಯಬಲೆಯರ ಮುಖವಲರ್ದ ಪಂಕಜಂ ಬಟ್ಟಮೊಲೆ ನಲಿವ ಚಕ್ರಂ ।
ಬಿಸಜಾಕ್ಷಿಯರ ರನ್ನದೊಡವೆ ನೋಳ್ಪೆಳೆಗೆ ಪೊಂ
ಬಿಸಿಲಾಗೆ ಸೂರ್ಯವಂಶಜನೀ ಕುಮಾರನೆಂ
ದೊಸೆದು ಪೇಳುವ ತೆಱದಿ ಮದವಣಿಗಗೊಡರಿಚಿದ ಪಂದರಂ ಕಣ್ಗೆಸೆದುದು ॥ ೧೪ ॥

ಇಂತು ಮಧುರೆಯ ಪಟ್ಟಣದೊಳಾ ವಿವಾಹೋತ್ಸ
ವಂ ತಳ್ತು ನೆಗಳುತಿರೆ ಕುಡುಗುಲೂರೊಳು ಮಹೀ
ಕಾಂತನೆನಿಪಮರನಾಥನ ಸನ್ನಿಧಿಗೆ ಬಂದಮಾತ್ಯ ಧೀಮಣಿ ಕ್ಕುವರನ ।
ಕಂತುಸನ್ನಿಭನ ಗೋಧರನ ಗಂಭೀರವನ
ನಂತಸದ್ಗುಣ ಚಾತುರಿಯ ರೂಪು ಯವ್ವನವ
ನಂತಾಗ ಬಿತ್ತರಿಸಿದಂ ಭೂವರನ ಮನಂ ನಲಿಯೆ ಜನರೆಲ್ಲರೊಲಿಯೆ ॥ ೧೫ ॥

ಚೆಲ್ವಮರ್ದ ಲಾವಣ್ಯರಸದ ಹೊನಲುಕ್ಕಿ ಮಿಗೆ
ಮೇಲ್ವಾಯ್ದ ಜವ್ವನದ ಕಂಪು ಪೆಂಪೇಱಿ ನೆಱೆ
ಗೆಲ್ವೆತ್ತ ಜಾಣ್ನುಡಿಯ ಸೊಗಸು ಸೊಬಗಂ ಸೂಸುತಿರೆ ಕುಮಾರಕನ ಕಂಡು।
ಸೊಲ್ವಡೆದು ಬೆಂಬತ್ತದವರೊಳರೆಯಿಾ ನೆಲದ
ನಲ್ಲೆಂಡಿರೊಳಗೆಂದು ಮಂತ್ರಿ ಭೂಪನ ಮನಕ
ದೊಲ್ವಂತೆ ಬಿನ್ನೈಸೆ ಪರಿಣಯಕೆ ಪುತ್ರನಂ ಸಿಂಗರಿಪುದೆಂದನರಸಂ ॥ ೧೬ ॥

ತವೆ ತಮಾಲದ ಲತೆಗೆಯಾ ಸ್ನೇಹರಸವನೆಱೆ
ವವೊಲುತ್ತಮಾಂಗದೊಳು ಕಮ್ಮೆಣ್ಣೆಯಂ ತೀವಿ
ರವಿಜೆ ಕಾಳಿಂದಿಯಂ ಕಮಲಾಯಿ ತಾಯಿ ಮುದ್ದಾಡಿಸುವ ಮಾಳ್ಕೆಯಿಂದೆ ।
ಪ್ರವರಕೇಶವನಬಲೆ ಕಮಲೆ ಕಾಯುತ್ತ ಸರ
ಸವನಾಡುವಂದದಿಂ ಕಮಲೆಯೆಂಬೆಳೆವೆಣ್ಣು
ಕುವರಂಗೆ ತೈಲವೊತ್ತಿದಳು ಕರಕಮಲದಿಂ ಕುರುಳಾಡೆ ಕೂಡೆ ಕೂಡೆ ॥ ೧೭ ॥

ಬಳಿಕ ಪನ್ನೀರಿಂದ ಮಜ್ಜನಂಬೊಕ್ಕು ನಿ
ರ್ಮಳಮಪ್ಪ ಸಪುರಮಂ ಪೊದೆದುಟ್ಟು ಮಕುಟಮಂ
ತಳೆದು ಕಸ್ತೂರಿ ಚಂದನ ಕುಂಕುಮಾದಿ ಪರಿಮಳ ಲೇಪನಂಗೆಯ್ಯಲು ।
ಘಳಿಲನಂತಾಗ ಸುಪ್ರೌಢೆಯರು ತಂದು ಮಂ
ಗಳಮಪ್ಪಲಂಕಾರಮಂ ತೊಡಿಸುತಿರ್ದರಾ
ಯಿಳೆಯಾಣ್ಮ ಚೇರಮಂಗಲರ್ವಿಲ್ಲನಲರ್ವಿಲ್ಲಿಗಲರಂಬ ತೊಡಿಸುವಂತೆ ॥ ೧೮ ॥

ಸೊನ್ನೆಮಣಿಗೀಲಣದ ಪೆಂಡೆಯದ ಮಿಗೆ ಚೆಲ್ವ
ಚಿನ್ನದುಡಿದಾರದೊಳ್ಪೆಳ್ವಟ್ಟೆಯಂಬರದ
ರನ್ನ ಮುತ್ತಳವಟ್ಟ ಭುಜವಲಯ ಭುಜಕೀರ್ತಿ ವಜ್ರಮಾಣಿಕದ ಕಡಗ ।
ಚೆನ್ನೆಸೆವ ಪದಕವುತ್ತಮ ಕಂಠಮಾಲೆಯ ಸ
ಮುನ್ನತದ ಕರ್ಣಭೂಷಣದ ಪೊಂಬಾಸಿಗದ
ತನ್ನ ಕರದೊಳಮರ್ದ ಮಾದೂಫಲದ ಮದವಣಿಗನೆಯ್ದೆ ನಮಿಸಲರಸಂ ॥ ೧೯ ॥

ನೋಡಿ ಕುವರನ ಸಂತಸಂಬಟ್ಟ ರಾಯುನ
ತ್ಯಾಡಂಬರಂ ಮಿಗಲು ಚತುರಂಗ ಸೇನೆಯುಂ
ಕೂಡಿ ಮಂತ್ರೀಶನಂ ಮುತ್ತೈದೆಯರ ಮುಗ್ಧಮಧ್ಯಮೆ ವಿದಗ್ಧೆಯರೊಳು ।
ಗಾಡಿಕಾರ್ತಿಯರ ಶೋಭನದಿಂದೆ ಸಂಭ್ರಮಂ
ಮಾಡಿ ಪಟ್ಟದ ಭದ್ರಗಜಮಸ್ತಕದೊಳು ಮುಂ
ಡಾಡಿ ಕುಳ್ಳಿರಿಸಿ ಬೀಳ್ಕೊಡೆ ನಡೆದುದಾ ದಿಬ್ಬಣಂ ಮಧುರೆಗಾನಂದದಿಂ || ೨೦ ||

ಆ ನಡೆವ ವೈವಾಹಜನರುಭಯ ಪಕ್ಷದೊಳ
ಗಾನೆಗಳ ಮೇಲೆ ಬರ್ಪೊಸಗೆ ಜವಳಿಗಳತಿ ನ
ವೀನತರ ಪಟ್ಟಕರ್ಮದ ಸೂತ್ರಮೆಸೆವ ನಾಣಯದಿಂದ ಭರಣಿಗಳೊಳು ।
ತಾನೆಸೆವ ಸಾದು ಚಂದನ ಜವಾದಿಗಳತ್ಯ
ನೂನ [1]ಕರ್ಪುರಂ ಹೇಮೋದಕಂಗಳಿನಂಗ[1]
ನಾನಿಕರದಂದಣಂ ಕೊಲ್ಲಾರಿಗಳ ಕೌವ್ವರೆಯೊಳು ನಡೆದರು ಸೊಗಸಿನಿಂ || ೨೧ ||

ತಳಿರ್ಗಳಸದಿಂ ಕುಸುಮಮಂಜರಿಗಳೇಳ್ಗೆಯಿಂ
ದೆಳೆನೀರ ತಂಡದಿಂ ತನಿವಣ್ಣ ಹೊಱೆಗಳಿಂ
ತಿಳಿದ ಜಲಪೂರ್ಣವಹ ತಂಗರಗದಿಂದಲಾ ಭರಿತ ಚಂದಪ್ರನನೆಯರಿಂ ।
ಅಳಿಗುರುಳು ಗಿಳಿವಾತು ಕೋಕಿಲಸ್ವರದ ಪೆಂ
ಗಳಿನರಸುಕುವರ ಕಾಮಂ ಮಂತ್ರಿಯೆಂಬ ನಿ
ರ್ಮಳವಸಂತಂ ಸಹಿತ ನಡೆದು ಪೊಱಪೊಳಲ ಬನಪೊಕ್ಕು ಬರೆ ಮಧುರೆಯಲ್ಲಿ || ೨೨ ||

ಕೇಳ್ದು ಭೂಭುಜನಲ್ಲಿಯತಿಶಯದ ಹರುಷಮಂ
ತಾಳ್ದು ಸಚಿವಾಧೀಶ ವಿತರಣ ಗುಣಾಢ್ಯನಂ
ನೀಳ್ದಕ್ಷಿಯಿಂ ನೋಡಿ ವೈಭವದೊಳಿದಿರ್ಗೊಂಬುದೆಂದೆನೆ ಹಸಾದವೆನುತ ।
ಆಳ್ದರಾಣತಿಯ ಸಂಭ್ರಮದಿ ನಡೆದಡಿಯಲ್ಲಿ
ಬಿಳ್ದು ಕುವರಂಗೆ ಕಾಣ್ಕೆಯನಿಕ್ಕಲುಭಯಬಲ
ವೆಳ್ದಿರ್ಗೆ ನಡೆವಲ್ಲಿ ಕೂಡೆ ಕೈದೀವಿಗೆಗಳೇಳ್ದವದನೇಂವಣ್ಣಿಪೆಂ || ೨೩ ||*

ತರಣಿ ಕೋಟಾಕೋಟಿಗಳ್ತನ್ನಮೇಲೆತ್ತಿ
ಬರುತಿರ್ಪುವೆಂದಳಱಿ ಸೂರನಂತಾಗ ಸಾ
ಗರದೊಳಗೆ ಮೈಗರೆದನೆಂಬುದನುಚಿತವಿನ್ನು ತನ್ನ ವಂಶದ ಕುವರನು ।
ಪರಿಣಯನಮಪ್ಪನಾ ದಂಪತಿಗಳಂ ನೋಡೆ
ಶರಧಿಯೊಳ್ ಮಿಂದು ಬಪ್ಪನ್ನೆಗಂ ಪರಿಜನದ
ಕರದಲ್ಲಿ ತನ್ನ ಕಿರಣಂಗಳಂ ಕೊಟ್ಟನೆನೆ ಹಲವು ಪಂಜುಗಳೆದ್ದವು || ೨೪ ||

---

[1] ಕರ್ಪೂರಗಳಿಂದ ಅಂಗ ? (ಗ). * 'ಗ' ಪ್ರತಿಯಲ್ಲಿ ೨೩ರಿಂದ ೨೭ನೆಯ ಪದ್ಯದವರೆಗಿಲ್ಲ.

ಶೈವನಿಧಿ ಪಡೆದರ್ಥಮಂ ಮಡಿವುತಣಗನ
ಪ್ಪಾ ವಿಮಲಧರ್ಮಶೀಲಂಗೀಯೆ ಭಾಗವಿ
ತ್ತಾ ವಣಿಜನನುಜ ನಿಷ್ಕರುಣಿಗವನದ ಕೆಡಿಸೆ ಶಂಕರಪ್ರೇಮಿಯನುಜೆ ।
ಸೇವೆಯಂ ಮಾಡುತಿರೆ ಪಡಗೊಳಗ್ರಜನಳಿಯ
ಲಾ ವಿಕಾರಂ ಕಾಡೆ ಅಣ್ಣನಾಗುತ ಬಡಿದ
ದೇವನಹ ಚೊಕ್ಕನಾರ್ಗಂ ನಮಿಸಿ ಚೇರಮಂ ನಡೆದನತಿಸಂಭ್ರಮದೊಳು ॥ ೨೫ ॥

ಉಭಯ ಸಂಭ್ರಮವೊಂದುಗೂಡಿದುತ್ಸಹವಾದ್ಯ
ರಭಸದಿಂ ಪಟ್ಟಣಂಬೊಗುವಲ್ಲಿ ಸಿಂಗರಿಸಿ
ದಿಭಮಸ್ತಕದೊಳೆಸೆವ ಕುವರಂಗೆ ಪುರಜನಂ ತನತನಗೆ ಕೈಮುಗಿಯಲು ।
ಅಭಯಹಸ್ತದೊಳಿಂಬಿಡುತ್ತಲತಿವೈಭವ
ಪ್ರಭವದಿನಲಂಕರಿಸಿ ಮೆಱೆವ ಬೀಡಾರಮಂ
ಸುಭಟ ದೇಶಾಧಿಪರು ಸೇವಿಸಲ್ಕೊಳಪೊಕ್ಕರಾನಂದವುಣ್ಣುತಿರಲು ॥ ೨೬ ॥

ವಿತರಣ ಗುಣಾಢ್ಯಮಂತ್ರೀಶನಂತಲ್ಲಿಯು
ನ್ನತ ಶರ್ಕರಾಪಾನ ಫಲಭಕ್ಷ್ಯ ದಿವ್ಯಾನ್ನ
ವತಿ ಪರಿಮಳದ್ರವ್ಯ ಕರ್ಪೂರ ತಾಂಬೂಲಮುಖ್ಯ ಸಾರಂಗಳಿಂದ ।
ಕ್ಷಿತಿಪರಂ ಸತ್ಕರಿಸಿ ಕುವರನಂ ಬೀಳ್ಕೊಂಡು
ಮತಿವಂತನೆಳ್ತಂದು ಪಾಂಡ್ಯಭೂಪಾಲಗೀ
ಸ್ಥಿತಿಯ ಬಿನ್ನವಿಸೆ ನೃಪನಾ ಸೌಂದರಾಂಗಿಯಂ ಸಿಂಗರಿಸವೇಳೆಂದನು ॥ ೨೭ ॥

ಅಂಚೆಗಮನೆಯರಾಗ ಶುಭಶೋಭನಂಗಳಿಂ
ದಂ ಚಮತ್ಕೃತಿಯ ವಾದ್ಯಧ್ವನಿಗಳೇಳ್ಗೆಯಿಂ
ಚಂಚಲಾಕ್ಷಿಯ ಸೌಂದರಾಂಗಿಯ ಕುರುಳ್ಗಳಂ ಬಗಿದು ಕಮ್ಮೆಣ್ಣೆವೊಯ್ದು ।
ಚಂಚರೀಕಂಗಳೊಳು ಸರಸವಾಡುತ್ತಿರ್ಪ
ಪಂಚಶರದಂತೆ ನರ್ತಿಸಿ ಬೆರಳ್ಕೊಲೆಯಲುಗ
ಲೇಂ ಚದುರೊಳೊತ್ತಿದರೊ ಸತಿಯರುತ್ತಮರೂಪವತಿಯರು ಸುಖಾಕೃತಿಯರು ॥ ೨೮ ॥

ಸಾರಪರಿಮಳಮಪ್ಪ ಪನ್ನೀರ್ಗಳಿಂದಾ ಕು
ಮಾರಿತಿಯ ಮಜ್ಜನಂಬೊಗಿಸಿ ವನಿತೆಯರಲ್ಲಿ
ಚೇರಮನ ಮಾನಸಸರೋವರದೊಳಳ್ಕಱಿಂ ಕ್ರೀಡಿಸುವ ಪೆಣ್ಣಂಚೆಯ ।
ಸೇರುವೆಯ ಗಱಿಗಳೋ ನಿಱಿಗಳೋ ಎಂಬ ವಿ
ಸ್ತಾರದ ದುಕೂಲಮಂ ತಂದುಡಿಸಿ ಬಳಿಕಲು
ಪ್ಚಾರತಿಯನೆತ್ತಿದರು ಭಾಮೆಗಾ ಭೂಪಾಲಚೈತ್ರವಿನುತಾರಾಮೆಗೆ ॥ ೨೯ ॥

ಕಾವನೈಸರಲಿಮ್ಮಡಿಸಿ ಕಣ್ಗಳಂ ಪಡೆದು
ಭಾವದಿಂದುಗುರ್ವೆಳಗಿನಡಿವೆರಲಿಗುತ್ತಮದ
ಲಾವಣ್ಯರಸದ [1]ಕಡೆಗಟ್ಟಿಂಬಿನಂ[1] ಪಿಲ್ಲಿ ಪೊನ್ನುಂಗುರವನಮರ್ಚಿ |
ಓವಿ ಪೆಣ್ಣಂಚೆಗಳ ಪಲ್ಲಮುಱಿಗಳ ನಡೆಯ
ರಾವದಿಂ ಜಱಿದು ಧಿಕ್ಕರಿಪಂತೆ ರತ್ನಾಂದು
ಕಾವಳಿಯ ಪಾಯವಟ್ಟವನಿಟ್ಟರಾ ಕುಮಾರಿತಿಗೆ ಶಿವಭಕ್ತಿರತಿಗೆ || ೩೦ ||

ಧಾತ್ರಂ ಶರತ್ಕಾಲವರಪೂರ್ಣವಹ ಕುಮುದ
ಮಿತ್ರನಂ ಚೆಲ್ವಕುವರಿಯ ಮೊಗಕ್ಕಮರಿಚಿ ಪ
ವಿತ್ರ ಶಾರದವಿಲಸದಂಬರವನಿವಳ ಬೆಳ್ವಟ್ಟೆಯು[2]ಳ್ಳು[2]ಡೆಯ ಮಾಡಿ |
ಚಿತ್ರವೆನಲೆಸೆವ ಪರಿಸೂತ್ರಮಂ ತಂದು ಕಟಿ
ಸೂತ್ರಮಂ ರಚಿಸಿದನೊ ಪೇಳೆಂದೆನಲು ನೀಳ
ನೇತ್ರೆಯರು ನಲಿದಿಟ್ಟ ಮಣಿಖಚಿತಕಾಂಚಿ ರಾರಾಜಿಸಿದುದೇನೆಂಬೆನು || ೩೧ ||

ಅಂಗನೆಯ ಮಿಸುಪಂಗದೇಶಮಧ್ಯಕ್ಕಿದೇ
ಕಂಗೊಳಿಪ ನಡುನಾಡಿದೆಂದತನು ನಿಲಲು ಪೊಸ
ಪೊಂಗೋಂಟೆಯಂ ರಚಿಸಿದರೊ ಮೇಣ್ನಿತಂಬಕುಚವೆರಡುನ್ನತಿಗೆ ಪೋಱುವ |
ಸಂಗರವನಂಗಜನ ಮುದ್ರಧಾರಿಗಳೆನಿಪ
ಪೆಂಗಳುರೆ ಬಿಡಿಸಿ ಬಳಸಿಟ್ಟಿಲ್ಲಿಗಲ್ಲೆನಲು
ರಂಗುಮಾಣಿಕದ ಮಿಸುನಿಯವೊಡ್ಡಿಯಾಣಮಂ ತಂದಿಟ್ಟರಬುಜಾಕ್ಷಿಗೆ || ೩೨ ||

ನಾಡೊಡೆಯ ಚೇರಮಾಂಕನ ನೇತ್ರಪುತ್ರಿಕೆಗ
ಳಾಡುತಿಹ ಲೀಲಾಸುವರ್ಣಶಿಖರಿಗಳೊಯೆನೆ
ಗಾಡಿಯಿಂದೊಪ್ಪುತಿಹ ಬಟ್ಟಮೊಲೆಗಳ್ಗೆ ಚಂದನ ಕಸ್ತುರಿಯ ಮಿಶ್ರವ |
ಮಾಡಿ ಲೇಪಿಸಿ ಕನಕಪರ್ವತದ್ವಯದ ಮೇ
ಲಾಡಂಬರದ ಹಿಮಕಣಂ ಮುಸುಕಿತೆನೆ ಜೋಕೆ
ಮಾಡಿ ನೇರ್ಪಡಿಸಿದರು ಮುತ್ತಿನ ಸೆಱಂಗೆಸೆವ ಮೇಲುದಂ ಜಾಣೆಯರ್ಗಳು || ೩೩ ||

ಹೊಸಹರೆಯವೆಂಬ ಮುತ್ತೈದೆ ಪೊಕ್ಕುಳ್ಗೊಳನೊ
ಳೆಸೆವ ಲಾವಣ್ಯಾಂಬುವಂ ಪೊಂಗೊಡಂಗಳಿಂ
ದೊಸೆದು ಮೊಗೆಮೊಗೆದೆತ್ತಿ ಬಾಸೆಗೈಯಿಂದೆ ಪಿಡಿದೆರ್ದೆವನೆಯ ಮುಂಬಿನಲ್ಲಿ |
ಹಸನಾಗಿ ಬೈತ್ತೈರಣೆಗಳಂತೆ ನಾಡೆ ರಂ
ಜಿಸಿದವಾಕೆಯ ಮೊಲೆಗಳವಱಿಡೆಯ ಹೆಜ್ಜೊಡರ
ಮಸಕದಿಂ ಹಾರ ಮಣಿ ಮೆಱೆಯಲೊಪ್ಪಿರ್ದಳಾ ಹೆಣ್ಣು ನಿಜಪತಿಯ ಕಣ್ಣು || ೩೪ ||

---

[1] ಕಡೆ ಕಟ್ಟಿಂಬಿನಿಂ (ಗ) [2] ಳೈ (ಗ)

ಪೊಡವಿಪತಿ ಚೇರಮಾಂಕನ ಚೆಲ್ವ ಕದಿರ್ಗಱಿವ
ಕಡೆಗಣ್ಣನೋಟವೆಂದೆನಿಪ ಸಿರಿವೆಣ್ಣು ಬಂ
ದಡರುತಿಹ ನವರತ್ನಖಚಿತ ಸಿಂಹಾಸನವೊ ಪೇಳೆನಲು ಮಣಿಗೆಲಸದ ।
ಕುಡಿವೆಳಗನುಗುಳುತಿಹ ಪದಕಮಂ ತಂದು ನೇ
ರ್ಪಡೆ ಸಾರ್ಚಿ ಸುಗುಣಮಣಿಹಾರೆಯೆಂಬುದನು ಕ
ನ್ನಡಿಪಂತೆ ಪಲವುಮಣಿಹಾರಮಂ ತಂದಿಟ್ಟರುರದಲ್ಲಿ ನಿಜಸಖಿಯರು ॥ ೩೫ ॥

ಪೊಡವಿಪನ ನೋಡಿಯುಪ್ಪುವಡೆ ತೋಳ್ಪಲಗಣ್ಣ
ಪಡೆದಂತೆ ಬಳಸಿ ಕೀಲಣೆಗೈದ ಬಜ್ಜರದ
ನಡುವೊಪ್ಪುವಿಂದ್ರನೀಲದ ಬಾಹುಪೂರವಳವಡಿಸಿಯಾತ್ರಿದಿವ ಸುಖದ ।
ಕಡೆಗೆ ಚಿಂತಿಸಿದಲ್ಲದೀಯದವಗುಣವನೀ
ಮಡದಿಯೊಲಿದೀವತ್ಯುದಾರ ನಿರ್ಮಲ ಹಸ್ತ
ದೆಡೆಗೆಯ್ದಿ ಬಳಿಕ ಚಿಂತಾಮಣಿಗಳೆನೆ ರನ್ನಗಡಗವಿಟ್ಟರು ಸತಿಯರು ॥ ೩೬ ॥

ಬಲ್ವಿಡಿದ ಭಕ್ತಿಯಿಂ ದವನೇಂದು ನಾಸಿಕದ
ರಲ್ವ ಚಂಪಕ ಕುಸುಮದಿಂ ನಾಡೆ ಸುರರಮರ್ದ
ಗೆಲ್ವ ಮಿಸುಪುಸುರ್ಗಂಪಿನಾರೋಗಣೆಯಿನರ್ಚಿಪಮಲ ಮೌಕ್ತಿಕಲಿಂಗಮೊ ।
ನಲ್ವಡದ ಮೊಗಚಂದಿರನ ಸುಧಾರಸವೊ ಸರಿ
ನಿಲ್ವಲ್ಲಿ ನಾಸಾಪುಟಾಸ್ವಾದದಿಂ ಬಲಿದ
ವೊಲ್ವಿರಾಜಿಸಿತೊಯೆನೆ ಚೆಲ್ವಿಗೆಯುಮರ್ಚಿದರು ಸಲ್ವ ಪೊಸಮೂಕುತಿಯನು ॥ ೩೭ ॥

ಚೆನ್ನೆಸೆವ ಕೋಮಲಾಂಗಿಯ ಮುದ್ದುಮೊಗವೆಂಬ
ಮುನ್ನೀರ್ಮಗಂ ತನ್ನ ಕಳೆಗಳನೆರಳ್ಬಾಗೆ
ಯನ್ನಾಡೆ ರಚಿಸಿ ನೆಱೆಮುತ್ತುದುತ್ತುಗಳಿಟ್ಟು ಕರ್ನಪತ್ರಂಗಳೆಂಬ ।
ಹೊನ್ನ ಹರಿಯಾಣದೊಳಗೆಡೆಮಾಡಿ ನೃಪನ ಕಣ್
ಜೊನ್ನವಕ್ಕಿಗಳೂಟಕೊಡರಿಚಿದನೆಂಬಂತೆ
ಕನ್ನೆಗೆಯುಮರ್ಚಿದರು ಸತಿಯರೆಸೆವೋಲೆಯುಂ ಕಾವನೋಲಗಶಾಲೆಯುಂ ॥ ೩೮ ॥

ಕಾಳಗಕೆ ನಯನಾರ್ಜುನಂ ಬಂದವಾರ್ತೆಯುಂ
ಕೇಳಿ ಕರ್ಣಂ ಚಿತ್ರದೋಲೆಯುಂ ಕಿರಣವೆಂ
ಬಾಳಿಂದ ಕಳುಪಲೊಡನೀ ಸತಿಯ ಮುಖಶಾಲೆಯೊಳಗಿರ್ದು ಕಂಡು ಮುಳಿದು ।
ನೀಳೆಸಳ್ಗಳೆಂದೆಂಬಲಗಿನಿಂದಿಱಿದೊಡೆ ಛ
ಡಾಳದಿಂ ಕೀಲಿಸಿದ ಮಾಳ್ಕೆಯಿಂದರರೆ ಭೂ
ಪಾಲನರ್ಧಾಂಗಿಯಾಕರ್ಣಾಂತವಾದ ನೇತ್ರಕ್ಕಿಟ್ಟರಂಜನವನು ॥ ೩೯ ॥

ಕಂದುಕಂದಿನಿತು ನಸುದೋಱದೀ ಸತಿಯ ವದ
ನೇಂದುವಂ ನೋಳ್ಪೆನೆಂದತಿಸೂಕ್ಷ್ಮತರರೂಪಿ
ನಿಂದಲೆಯ್ತಂದ ಪರಿಪೂರ್ಣಚಂದಿರನೆನಲು ಸೌಂದರಾಂಗಿಯ ಪಣೆಯೊಳು ।
ಗಂಧಕಸ್ತೂರಿಯನಡಕಿಲ್ಪೊಟ್ಟ ಕಾಂತೆಯರು
ತಂದಿಟ್ಟರಳಕಾಳಿಯೆಂಬ ಕತ್ತಲೆಯ ಮುಳಿ
ಸಿಂದ ಮುತ್ತಿವ ಬೆಳಗಿನುರುಳಿಯೆನಲೆಸೆವ ಮುತ್ತಿನ ಸೂಸಕವನಿಟ್ಟರು ॥ ೪೦ ॥

ಸುಳಿಗುರುಳೆನಿಪ್ಪಿರುಳ ತಿರುಳ ಹೊರಳಿಯ ಜಗುನೆ
ಯೊಳಗೊಗೆದ ಹೊಂದಾವರೆಗಳಂತೆ ಮುಡಿಗೆ ಮಂ
ಗಳಮಪ್ಪ ಮಣಿದೊಂಡಲಿಟ್ಟು ಬಳಿಕಾ ಕರ್ಣನೇತ್ರ ಶಿವಲಿಂಗಾಂಘ್ರಿಗೆ ।
ಅಳವಟ್ಟ ಕಮಲೆಯಾ ಶ್ರುತಿಮೂಲವಾಗಿ ನಿ
ರ್ಮಳಪೂಜೆಯಂ ಮಾಡುವಂತೆಸೆವ ಹೊನ್ನ ಹೂ
ಗಳ ಮುಗುಳುಗೊಪ್ಪುಗಳನಳವಡಿಸಿದರು ಸಖಿಯರಾಕೆಗತಿ ಸುಶ್ಲೋಕೆಗೆ ॥ ೪೧ ॥

ನಲ್ಮೆಯಿಂ ಸಿಂಗರಿಸಿ ಕುವರಿಯಂ ತೋಱ ಕಾ
ದಲ್ಮೆಯಿಂದರಸು ಬರವೇಳೆನಲ್ ಮುನ್ನವಾ
ಕಲ್ಮಗಳನುಜ್ಞೆಯಿಂ ರುದ್ರವಾಣಿಯ ಪುಟ್ಟೆ ಭೋಜನುದಯಿಪ ಕಾಲವ ।
ಮೇಲ್ಮೆಝುರೆ ದೃಷ್ಟಮೆನೆ ತೋಱ ದರ್ಪ ವರರುಚಿಯ
ಪೋಲ್ಮೆಂಗಳವನು ಜೋಯಿಸರುಸುರೆ ಚೇರಮಂ
ಸಾಲ್ಮೆನ್ನೆಯರ ವೈಭವದಿ ಮಂಟಪಕ್ಕೆ ಬಂದೊಲ್ಮೆಯಿಂದಂ ನಿಲ್ಲಲು ॥ ೪೨ ॥

ವಿಳಸದಂತಃಪುರದೊಳಿರ್ದು ಬುಧರಿಟ್ಟ ಮಂ
ಗಳ ಮುಹೂರ್ತದೊಳು ಪೊಱಮಟ್ಟು ಮಣಿಚಾಮರಂ
ಗಳ ಢಾಳಿಸುತ್ತಿರ್ಪ ಚೆಲ್ವೆಯರ ಕಂಕಣ ಝಣತ್ಕಾರರಾವದಿಂದೆ ।
ಎಳೆವೆಣ್ಗಳಿಡುವ ವೀಜನದ ತಂಬೆಲರಿಂದೆ
ಬಳಸಿದಂಗನೆಯರಿಂದಂ ಹಸೆಯಮಂಟಪಕೆ
ಧಳಧಳಿಪ ತನುಕಾಂತಿ ಸತಿಯರಾವರಿಸೆ ಸಲೆ ಬಂದಳಾ ಸೌಂದರಾಂಗಿ ॥ ೪೩ ॥

ಚೆಲುವ ಪುರುಷೋತ್ತಮರ ಮಾಸತಿಯರೆಡೆಯಲ್ಲಿ
ನಲಿದು ಪಾಲ್ಗಡಲ ತೆರೆ ಮಿಱುಗುವಂತಾಗಲು
ಜ್ವಲಿಪ ದಂಪತಿಗಳಿದಿರಲ್ಲಿ ಜವನಿಕೆವಿಡಿದುಗುರ್ಗೊನೆಯಪಾಂಗರುಚಿಯ ।
ಸುಲಿಪಲ್ಲ ಬೆಳ್ಪೆಳಗು ಜಗುಳ್ದು ಬಿದ್ದಂದದಿಂ
ಲಲನೆಯರು ಮುಟ್ಟಕ್ಕಿಯಂ ತಂದು ಹರಹಿದರು
ನೆಲನಾಳ್ಮನಣುಗ ಚೇರಮ ಸೌಂದರಾಂಗಿಯರು ನಿಲಲಂದು ಸೊಗಸಿನಿಂದ ॥ ೪೪ ॥

ಅಣಿಯುರದೊಳುಭಯ ದೇಶಾಧಿಪರು ನೆರೆಯೆ ಸಂ
ದಣಿಸಿ ಮುತ್ತೈದೆಯುರು ಬಳಿಕಲಾವೇಳೆ ರೋ
ಹಿಣಿಚಂದ್ರರೆಡೆಯ ಶರದಭ್ರಮಂ ಮಾರುತಂ ಪಿಂಗಿಪಂದದೊಳು ನೆರೆದ ।
ಗುಣಕೋಟಿಯಿರ್ದಡೇಂ ಪ್ರಣಯಕಂಟಕರು ಧಾ
ರುಣಿಯಲ್ಲಿ ಕಡೆಗೆ ತೊಲಗಿಸಿಕೊಂಬರೆಂದೆಂಬ
ಬಣಿತೆಯಂ ಸಾಱಿ ಡಿಂಡಿಮವಲ್ಲಿ ತೆರೆ ಸರಿಯಲಾಯತಧ್ವನಿಯುಣ್ಮಿತು ॥ ೪೫ ॥

ಎನಗೆ ಮುನ್ನವೆ ಜಯಾಂಗನೆಯ ಭುಜದೊಳ್ತಾಳ್ದು
ಕೊನೆವೆರಲ ನೀನಿತ್ತ ನೀಡಬಂದಾಯೆಂದು
ಮುನಿದಿಡುವ ತೆಱದಿ ಜೀರಿಗೆ ಬೆಲ್ಲದಿಂ ವನಿತೆ ನೃಪನ ಮುಕುಟವನಿಡಲ್ಕೆ ।
ವನಜಾಕ್ಷಿ ನಿನ್ನ ಮುಡಿಯೆನಿತಾದೊಡುಂಟೆಂದು
ಕನಲಿಡಲ್ಕಂಪನದಿ ಸಡಿಲಿ ಗುಡ ಜಾಱಿ ಮೋ
ಹಿನಿಯ ಪದದೊಳ್ ಬೀಳಲಾಗಿ ಪೆಣ್ಗೆದ್ದುದೆಂದರು ಪಾಂಡ್ಯಸತಿಯರ್ಕಳು ॥ ೪೬ ॥

ಧರ್ಮಕೀರ್ತಿಯ ಲತೆಯ ಬಿತ್ತ ಸುಸ್ಥಲದೊಳಗೆ
ಭರ್ಮದೊಡವೆರಸಿ ಬಿತ್ತುತ್ತಮೃತವೆಱೆವಂತೆ
ನಿರ್ಮಲಾಕ್ಷತೆಯಂ ಸುವರ್ಣಮಂ ನೃಪನ ಕರದೊಳಗಿಟ್ಟು ಧಾರೆಯೆಱೆದು ।
ಕೂರ್ಮೆಯಿಂ ಸದ್ಗುಣಂ ದಂಪತಿಗಳಂ ಬಳಸಿ
ಯೊರ್ಮೆಯುಂ ಬಿಡದೆಂಬವೊಲು ಪಾಂಡ್ಯನಮಲ ಸ
ತ್ಕರ್ಮದಿಂ ಸುತ್ತಿದಂ ತಂತುವಂ ಕೇರಳಕುಮಾರಗೆ ಮಹಾಶೂರಗೆ ॥ ೪೭ ॥

ಶ್ರೀಮಹಾದಕ್ಷಿಣಾಮೂರ್ತಿ ಶಿವನರ್ಧಾಂಗಿ
ವಾಮದೇವನ ವಾಮಭಾಗಕ್ಕೆ ಬರ್ಪಂತೆ
ವಾಮಲೋಚನೆ ನೃಪನ ಬಲದಿಂದೆಡಕ್ಕೆ ಬಂದಳು ಕೂಡೆ ಹರುಷದಿಂದ ।
ಪ್ರೇಮದಿಂ ಪೂರ್ಣಕಳಸದ ಯಜ್ಞವೇದಿಕೆಯ
ರಾಮಣೀಯಕ ವಿಧಾನಂಗಳಂ ಕೈಕೊಂಡು
ಧಾಮಮಂ ಶೋಭನದ ಜಯಜಯಧ್ವನಿಯಿಂದೆ ಪೊಕ್ಕರಾ ದಂಪತಿಗಳು ॥ ೪೮ ॥

ಇಂತು ಪರಮೋತ್ಸಾಹದಿಂ ಗೃಹಮನೊಳಪೊಕ್ಕ
ನಂತ ಶಿವಗಣಸುಪ್ರಸಾದಮಂ ವಿಭವದಿಂ
ಕಂತುರತಿಸನ್ನಿಭಮಹಾದಂಪತಿಗಳು ಕೈಕೊಂಡಲ್ಲಿ ನಾಗವಲ್ಲಿ ।
ಮುಂತಾದ ಸಂಭ್ರಮಂಗಳನೆಸಗಿ ಪಾಂಡ್ಯಭೂ
ಕಾಂತನೊಲವಿಂದಿತ್ತ ಧನಕನಕಧರಣಿ ವರ
ಕಾಂತಾದಿ ಚತುರಂಗಸೇನೆಗಳ ಬಳುವಳಿಗಳಿಂದೂರ ಪೊಱಮಟ್ಟರು ॥ ೪೯ ॥

ಒಡವಂದ ಪಾಂಡ್ಯಭೂಪಾದಿಗಳ ಬೀಳ್ಕೊಟ್ಟು
ಪೊಡವಿಪತಿ ಚೇರಮಂ ನಿಜವನಿತೆ ಮುಂತಾದ
ಮಡದಿಯರ ಪಲ್ಲಕ್ಕಿ ಕೋಟಾನುಕೋಟಿಗಳು ಸಹಿತ ಗಜಮಸ್ತಕವನು ।
ಅಡರಿ ಚತುರಂಗಬಲದಿಂ ಪರಮವಿಭವದಿಂ
ನಡೆದು ಮಂತ್ರೀಶಾದ್ಯರಿಂ ಮದುವೆಬಂದಾಗ
ಕುಡುಗಲೂರಂ ಪೊಕ್ಕುದಿದಿಗೋಂಬ ವೈಭವದಿನಾನಂದಮುಣ್ಮುತಿರಲು ॥ ೫೦ ॥

ಅಮರನಾಥಾವನೀಶ್ವರನ ಗುಣವತಿ ಮಾತೆ
ಯಮಳ ಪಾದಾಂಬುಜಕ್ಕೆಱಗಿ ದಂಪತಿಗಳಾ
ಸುಮುಹೂರ್ತದುತ್ಸವಂಗಳನು ಕೈಕೊಂಡು ಪರಮಾನಂದದಿಂ ಭಕ್ತರ ।
ಸಮಿತಿಗಿಷ್ಟಾರ್ಥವಸ್ತುಗಳನರ್ಪಿಸಿ ಕೀರ್ತಿ
ರಮಣಿ ದಶದಿಕ್ಕಿನೊಳು ಪರಿದಾಡಲಾಗಿ ಭೂ
ರಮಣನಾ ತಿರುವಂಜಕಳನಾಥನಂ ಭಜಿಸುತಿರೆ ಹಿಮಂ ತಲೆದೋಱಿತು ॥ ೫೧ ॥

ಶೃಂಗಾರರಸಭರಿತೆಯಕಳಂಕಚಂದ್ರಮುಖಿ
ಮಂಗಲೆಯಿರಲ್ ಧರೆಯ ಪುಟ್ಟಿಸುವ ರಕ್ಷಿಸುವ
ಕಂಗಳಿರುತಿರಲಾಸೆ ತೀರದಾ ಗಂಗೆ ದೋಷಾಕರಂ ಪಣೆಗಣ್ಣನು ।
ನೀಂ ಗರುವಿಕೆಯನುಳಿದು ತಳೆದುದಱಿಂದಧಿಕ
ಭಂಗಮಂ ಕಂಡು ಕುಂದಂ ನೋಡಲೆಡೆಗಿಚ್ಚ
ಹಿಂಗದಕ್ಕಟ ತಂದುಕೊಂಡೆಯ್ಯೆ ವರಭೋಗಮಲ್ಲ ಗಿರಿಸುತೆಯ ನಲ್ಲ ॥ ೫೨ ॥*

ಇದು ಸಕಲ ಭಕ್ತಪದಪದ್ಮ ಮಧುಕರಪುಣ್ಯ
ಸದನ ಗುಬ್ಬಿಯ ಮಲ್ಲಣಾರ್ಯರ ಕೃಪಾಪಾತ್ರ
ಮುದಿತ ನವರಸ ಭಾವಲಕ್ಷಣಾಲಂಕಾರನಿಪುಣನೆಂದೆನಿಸಿ ಮೆಱೆವ ।
ಚದುರಚೇರಮನೊರೆದ ಚೇರಮಚರಿತ್ರಮಂ
ಪದಪಿಂದ ಬರೆದೋದಿ ಕೇಳಿ ವಿಸ್ತರಿಸುವ
ರ್ಗೊದಗಿಪ್ಪುದಾಯುರಾರೋಗ್ಯಸಂಪದ ಸರ್ವಸಿದ್ಧಿ ಸತ್ಯಂ ತಥ್ಯವು ॥ ೫೩ ॥



* 'ಗ' ಪ್ರತಿಯಲ್ಲಿ ಈ ಪದ್ಯವಿಲ್ಲ.

# ಆರನೆಯ ಸಂಧಿ

**ಸೂಚನೆ :**

ಅಮರನಾಥಂ ಶಿವನನೆಯ್ದುಲಾ ಚೇರಮಂ
ವಿಮಲಪಟ್ಟಮನಾಳ್ದು ಪೊನ್ನರನ್ನದ ಮಳೆಯ
ನುಮೆಯಾಣ್ಮನಿಂ ಕಱೆಸಿ ಭದ್ರಗಾಯಕಗಿಷ್ಟವಿತ್ತುದಂ ಬಣ್ಣಿಸುವೆನು ||

ಎಂದೆಂದು ತಲೆಸೆಱಂಗೊಳ್ಕಟ್ಟೆ ಬಿಡದೊಡಕ
ಚಂದಿರವಣದೊಳೊಂದು ವೀಸಮಂ ಕರೆದಾರ್ಗೆ
ಯುಂ ದಯದೊಳಿತ್ತುದಿಲ್ಲದು ಮಾಣ್ದೊಡಲ್ಲಲ್ಲಿ ತಿರಿವುದಂ ಬಿಟ್ಟುದಿಲ್ಲ |
ತಂದೆ ನೀ ಪೊಂಬಿಟ್ಟನಡರಿಯಕ್ಷಾಧೀಶ
ನೊಂದಾಗಿ ಬಾಳ್ದು ಫಲವೇನದಂ ಬಯಸೆನಾ
ನಂದಭಕ್ತ್ಯರ್ಥವೀಯಯ್ಯ ನೆಲಕಲನಾಗದುಱೆ ಭೋಗಮಲ್ಲೇಶ್ವರ || ೧ ||*

ಸುಗುಣ ಚೇರಮನಿಂತು ವೈವಾಹವಾಗಿ ಬಂ
ದಗಣಿತದ ಹರುಷದಿಂದಿರೆ ಶರದ್ಭೂಪನಂ
ತಗುಳಿ ಕವಿದರ್ಕನಂ ಕಾಲ್ಗಿಡಿಸಿ ತಾವರೆಯ ಮೊಗಗೆಡಿಸಿ ಕೋಗಿಲೆಗಳ |
ಮಿಗೆ ಕೊರಲ್ ಕುಗ್ಗಿಸುತೆ ಹಲ್ಲ ಹಱೆಗಳು ಮುಂದೆ
ನೆಗಳೆ ಬಡವರ್ಗಳೆಲ್ಲಪ್ಪುಗೈಯಿಂದಲೋ
ಲಗಿಸೆ ಬಲ್ಲಿದರ ಕುಚದುರ್ಗಕ್ಕೆ ಹಾಯ್ಕುಸುತ ಬಂದನಾ ಹಿಮರಾಜನು || ೨ ||

ಹುಟ್ಟಱತುದಾ ಪದ್ಮಸಂಭವಂ ನಾಡೆ ಕಂ
ಗೆಟ್ಟನಂಬುಜನೇತ್ರನವನಬಲೆಯಿರ್ಪ ಮನೆ
ಗಿಟ್ಟೆಡೆಯದಾಯ್ತು ಮನುಜರ ಮಾತದೆತ್ತಣದು ಕರಿಸಿಂಹಶರಭಂಗಳು |
ನೆಟ್ಟನಾ ಹಿಮಶಿಶಿರಭೂಪಾಲನೆಯ್ತರ
ಲ್ದಿಟ್ಟತನಮಂ ಬಿಟ್ಟು ಕಡುಭೀತಿಯಂ ನಡುಗಿ
ಬಟ್ಟೆಯೊಳ್ನಿಲದೆ ಗಿರಿಗಹ್ವರಂಬೊಕ್ಕವಾ ಕಾಲದತಿಶಯವೆಂತುಟೊ || ೩ ||

ಘಾತಿಸುವ ಮಾಯಾಪ್ರಪಂಚೆಂಬ ಮಂಜಿನುರು
ಶೀತಮಂ ಶಿವಯೋಗಿಗಳು ಜ್ಞಾನಗಿಚ್ಚಿನಿಂ
ದೋತು ತೆವಱುವ ತೆಱದಿ ಕೂಡಿ ಮೊಲೆವೆಂಕೆಯಿಂದಗಲಿ ವಿರಹಾಗ್ನಿಯಿಂದ |
ಸಾತಿಶಯಮಪ್ಪ ಮೋಹಿಗಳುಳಿದರುಳಿದರಿ
ನ್ನೇತೆರದೊಳುಳಿದರೊಯೆಡೆವಿಂಡರಕಟ ಬಱ
ಮಾತಲ್ಲ ಬಂದಡಸಿ ಮುಸುಱತ್ತಹೋ ಶಿಶಿರಕಾಲವೆಸೆವಿಂದ್ರಜಾಲ || ೪ ||

---

* 'ಗ' ಪ್ರತಿಯಲ್ಲಿ ಈ ಪದ್ಯವಿಲ್ಲ.

ಇಂತಪ್ಪ ಹಿಮಶಿಶಿರದೊಳ್ ಸೌಂದರಾಂಗಿಸಹ
ಕಂತುಸನ್ನಿಭ ಚೇರಮಂ ನಲ್ಮೆಮಿಗಿಲು ತ
ನ್ನಂತಃಪುರಂಬೊಕ್ಕು ಶಿವಲಿಂಗಪೂಜೆಯುಮನೆಸಗಿ ಘೃತದುಗ್ಧಾನ್ನಮಂ ।
ಸಂತಸದೊಳಗಜಾವರಂಗಿತ್ತು ಕೈಕೊಂಡು
ಕಾಂತೆಯುನ್ನತಕುಚದ್ವಯತಟಮನುಱೆ ಸಾರ್ದ
ನಂತವೈಭವದಿಂದೆ ರತಿಕೇಳಿಯೊಳ್ಪಲವುಕಾಲಮೊಪ್ಪಿರುತಿರಲ್ಕೆ || ೫ ||

ಮುಂತೆ ಕೆಲವುಂದಿನಕ್ಕಮರನಾಥ ಕ್ಷಿತಿ
ಕಾಂತನಾ ನಿಷ್ಕುಂಭರಾಯನೋಹಿಲಕುವರ
ಗಂ ತಳ್ತು ಸಿರಿಜಾನವಕ್ಕೆಂದು ಮೇಣು ಬಲದೇವನಾ ನಿಜಕುವರಿಯು ।
ಕಾಂತ ಬಸವಗೆ ಪಟ್ಟವಾಗಬೇಕೆನುತಲೋ
ರಂತೆ ಶಿವಲೋಕದೊಳು ಹರಗೆ ಬಿನ್ನವಿಸಪೋ
ದಂತೆಯಾ ಚೇರಮಾಂಕನ ತಂದೆ ಶಿವಪುರಕೆ ಪೋದನೇವಣ್ಣಿಸುವೆನು || ೬ ||

ಕಂದಿ ಕುಂದದೆ ಮನದೊಳಂದವಳಿಯದೆ ತನ್ನ
ತಂದೆಯನದೇಕೆ ನೀಂ ಕೊಂದೆಯೆಲೆ ನಿಷ್ಕರುಣಿ
ಕಂದರ್ಪಹರನೆ ಕೇಳೆಂದು ತಾಂ ದುಃಖದಿಂ ನೊಂದು ಸುಜ್ಞನೆ ಸುಯ್ಯದೆ ।
ಅಂದಣ್ಣಲಾಂಬೆಯಾ ನಂದಿದಂಡದ ಭಕ್ತ
ನಿಂದುಮುಖಿ ಮಹದೇವಿಯೆಂದೆನಿಪ್ಪಂ ಮಗಳ
ಕಂದ ಚೇರಮನೆನಿಪ್ಪಂದದಿಂ ಮನದೊಳಗೆ ಮುಂದುಗೆಡದೊಪ್ಪಿರ್ದನು || ೭ ||

ಧರೆಯಖಿಳ ಭಂಡಾರ ಪುರಜನಂ ಪರಿಜನಂ
ಕರಿತುರಗರಥಸೇನೆಯೆನ್ನವೆಂದೆನ್ನದ
ತ್ಯರು ಶಿವಪದಧ್ಯಾನಸುಧೆಯಃ ಕೊಂಡವನಿಂದ್ರಪದವಿ ತೃಣವೆಂಬಂದದಿಂ ।
ಪರಿಕಿಸದೆ ಪರಮಾರ್ಥಿಯಾಗಿರ್ಪ ಚೇರಮನ
ಚರಣಕ್ಕೆ ನಮಿಸುತ ವಿಚಾರಪರಮಂತ್ರಿ ಶಿ
ಷ್ಟರು ಮನ್ನೆಯರು ಮಕುಟವರ್ಧನರು ಸಾವಂತರಾಗ ಬಿನ್ನಪವೆಂದರು || ೮ ||

ದೇವ ಚಿತ್ತೈಸು ಹಿರಿಯರಸು ಶಿವಪುರಕೆಯ್ದೆ
ನೀವೆ ಗತಿಮತಿಯಲ್ಲದೆಮ್ಮ ರಕ್ಷಿಪರಾರು
ಭೂವನಿತೆಗೋಲೆಭಾಗ್ಯವನೀಯಬೇಕೆಂದು ಸಾಷ್ಟಾಂಗದಿಂ ನಮಿಸಲು ।
ಓವಿದಯ್ಯೊಡಿಯ ನಿಜಗುಣಚಂದಿಮರಸರಾ
ಳಾವಾ ಪರಾಟ ತಾಪಸನ ಬಗೆಯಿರಲಿನ್ನು
ನೀವಾರು ನಾವಾರೆನುತ್ತ ವೈರಾಗ್ಯದಿಂ ಚೇರಮಂ ತಪಕೆ ಬಂದಂ || ೯ ||

ಪಿಂದಮರನಾಥನೆಯ್ದಿದ ದುಃಖವುಡುಗಿ ನೃಪ
ನಂದನನ ನೋಡಿ ಮಱದಿರ್ಪೆವೆನೆ ವೈರಾಗ್ಯ
ದಿಂದರಣ್ಯಂಬೊಕ್ಕೊಡರಸನಾ ನೋವುಣ್ಮೆತೊಂದೆರೆಳ್ಮಡಿಯಾಗಲು ।
ಬೆಂದ ಹುಣ್ಣಂ ಕಂಬಿಯೊಳಗಿಕ್ಕಿ ಕೀಸಿದವೊ
ಲಂದವಳಿದಾ ಸರ್ವಜನರ್ಗಳೊಡನೆಯ್ದಿಯಾ
ಮಂದೈಪ ದುಗುಡದಿಂದಂ ಮುಖಂ ಕಂದಿ ಸುಙನೆ ಸುಯಿವುತಂತಾಗಳು ॥ ೧೦ ॥

ಧರಣಿಯ ಜನಂಗಳಂತಾಪ್ತರುಂ ಪರಿಜನಂ
ಪುರಜನಂ ಮಿಡುಮಿಡನೆ ಮಿಡುಕುತಂ ಘೋಳಿಡುತೆ
ಕರಶೋಕಿಸುತ್ತೆ ಕಣ್ಣೊಡೆದಂತೆಯಾಪದ್ಧನವನೆಯ್ದೆ ನೀಗಿದಂತೆ ।
ಪರಮಸುಖದಿಂದಿರ್ದವರ್ಗೆಡತ್ತೋಱದಂ
ತುರುತರದ ದುಃಖವಾರಿಧಿಯೊಳೀಸಾಡುತಂ
ಕರಗಿ ಕೊರಗುತ್ತ ಸುಙನೆ ಸುಯ್ಯುತಂ ಮೊಗಂ ಕಂದಿ ಕುಂದುತ ನುಡಿದರು ॥ ೧೧ ॥

ತರಣಿಯಿಲ್ಲದ ಪಗಲ್ ಚಂದ್ರನಿಲ್ಲದ ರಾತ್ರಿ
ತರುಣನಿಲ್ಲದ ಗೃಹಂ ಪತಿಯಿಲ್ಲದಿರ್ಪ ಸತಿ
ಹರಣಮಿಲ್ಲದ ದೇಹಮೆಸೆವ ನಾಯಕರತ್ನವಿಲ್ಲದಿಹ ಕಂಠಮಾಲೆ ।
ಧರಣಿಯೊಳಗೊಪ್ಪಲಱಯದ ತೆಱದಿ ಸದ್ಗುಣಾ
ಭರಣ ಕೇಳೆಮಗೊಡೆಯರಾರೆಂಬುದಱಪೆಲೆಲೆ
ಶರಣ ನೀವೆಲ್ಲಿರ್ದೊಡಲ್ಲಿರ್ದು ಶುದ್ಧವೆಂದೆಯ್ದೆ ಭಾಷೆಯನಿತ್ತರು ॥ ೧೨ ॥

ಅವರಾಡಿದುನ್ನತದ ಭಾಷೆಯಂ ಕೇಳುತ್ತ
ಶಿವಶಿವಾ ನಾಂ ಬಿಟ್ಟೆನೆಂದೊಡಂ ಬಿಡದಲಾ
ತವೆ ಪುಲಿತ್ತಡಿಯರಂದೊಲ್ಲೆನೆನಲೀಶನಿಂ ಮರಳಿ ಸಂಸಾರವಾದ ।
ಪವಣಾದುದೆನಲಾಗಿ ಶರಣರಿಂತೆಂದರೆಲೆ
ಯವನೀಶ ಕೇಳ್ ಘೃತಂ ಪೊರೆಯೆ ಕೈಜಿಡ್ಡಹುದು
ಸವಿಯನಱಯದು ರಸಜ್ಞಂ ಲೇಪಿಯಲ್ಲದಿನಿದಱಯವಂತುಟಪ್ಪೆಯಯ್ಯ ॥ ೧೩ ॥

ಶುದ್ಧಪಕ್ಷದ ಚಂದ್ರಗೊದವಿರ್ದ ಕಿರಣಂ ಪ್ರ
ಸಿದ್ಧವಾ ಜೊನ್ನವಕ್ಕಿಗೆ ಹರುಷವೆಂಬಂತೆ
ಯುದ್ಧರಿಪುವನ್ವಯದ ಪಟ್ಟವರ್ಧನನಾಗಿ ಭಕ್ತಸೇವೆಯ ಮಾಳ್ಪುದೆ ।
ತದ್ಧರಾಭೂಷಣವೆನಲ್ತಿರುಗಿ ಬಂದು ಹಿಮ
ಕೃದ್ಧರಂ ತಿರುವಂಜಕಳನಾಥನಡಿಗೆಱಗಿ
ಮದ್ಧೈರ್ಯಕರ್ತ ಕೇಳೆನ್ನಯ ತಪಕ್ಕೆ ಕಂಟಕವಾದುದೆಂದು ನುಡಿದಂ ॥ ೧೪ ॥

ಶ್ರೀಯುಭವನಂ ನುತಿಸಲಶರೀರವಾಕ್ಕಿಂದೆ
ಮಾಯಾರಿ ನುಡಿದನೆಲೆ ಚೇರಮಾ ಕೇಳಯ್ಯ
ರಾಯನಪ್ಪುದು ದೋಷವೇಯೆಂದು ಸೇನಾನಿಯಾಗನೆ ಮತ್ಕುಮಾರಂ ।
ಈಯುಖಿಲರಂ ಸಲಹುವರಸುತನದಿಂದಿರ್ವು
ದೈಯಣುಗ ನಿನ್ನ ಸಿರಿ ಸುಖದುಃಖವೆನ್ನದೈ
ವಾಯವಲ್ಲೆನಲೀಶನಲ್ಲಿ ಪಟ್ಟಂಗಟ್ಟಿದರು ಭಕ್ತರುತ್ಸವದೊಳು ॥ ೧೫ ॥

ಆ ಸಮಯದೊಳಗಾಪ್ತರಾಮಾತ್ಯರುಂ ಸತ್ಪ್ರ
ಜಾಸಮೂಹಂ ಕಾಣ್ಕೆಯಿಟ್ಟ ಧನರಾಶಿಯಂ
ಲೇಸೆನಿಪ ಶರಣತತಿಗಿತ್ತು ಬೀಳ್ಕೊಂಡು ಚೇರಮಭೂಮಿಪಾಲನೊಲ್ದು ।
ವಾಸವಾನತಪಾದನಾಣತಿಯೊಳಂದು ಸ
ದ್ಭಾಸುರದ ಭದ್ರಗಜಮಸ್ತಕವ ನಡರ್ದನೆಳೆ
ನೇಸಱಂತುದಯ ಶೈಲೇಂದ್ರದಗ್ರವನೇಱಿ ತೋಱುತಿರ್ಪಾ ಪಾಂಗಿನಿಂ ॥ ೧೬ ॥

ಬಿರಿದೆತ್ತಿ ಕರೆವುತಿಹ ಕಹಳಾರವಂಗಳಿಂ
ಧರಣಿ ದಿಮ್ಮಿಡೆ ಪೊಡೆವ ನಿಸ್ಸಾಳ ಭೇರಿಯಿಂ
ತರಣಿ ಕಿರಣಂಗಳಂ ಪುಗಿಸದೆತ್ತಿರ್ದ ಪಲ್ಲವದ ಸತ್ತಿಗೆಗಳಿಂದೆ ।
ಉರುತರದಿ ಢಾಳಿಸುವ ಚಾಮರ ಸಮೂಹದಿಂ
ನಿರುತದಿಂದಿರ್ಕೆಲದಿ ಪಿಡಿವ ಸೀಗುರಿಗಳಿಂ
ಕರಿತುರಗರಥಪದಾತಿಗಳಿಂ ಪುರಂಬೊಕ್ಕು ವೀಧಿಯೊಳ್ ಬರುತಮಿರಲು ॥ ೧೭ ॥

ಇದಿರಲ್ಲಿಗಂಜಿ ಪೊರೆದಂಬರಂಬೊತ್ತುಬರ
ಲದಱ ರಸವಂಗದೊಳು ಲೇಪಿಸುತ್ತೊಣಗಲಂ
ಗದೊಳು ಭಸಿತೋದ್ಧೂಳದಂತಿರ್ದ ರಜಕನಂ ಭಸ್ಮಧರ ಭಕ್ತನೆಂದು ।
ಮದದಾನೆಯಿಂದಿಳಿದು ನೃಪತಿ ವಂದಿಸೆ ಕಂಡು
ಹೆದಱಿ ದೇವರ ಲೆಂಕನಸಗನಾನೆನೆ ಸುಭಾ
ವದೊಳವನ ನಿಜ ಭಕ್ತನಂ ಮಾಡಿ ನೋಡಿ ನುಡಿಸಿದರಖಿಳ ಶಿವಭಕ್ತರು ॥ ೧೮ ॥

ಖಂಡಿಸಿದ ವೈರಿಗಳ ತಲೆಗಳಂ ಮೂವತ್ತು
ಭಂಡಿಯೊಳ್ತರೆ ರಕ್ತಪಂಕದಿಂದಂ ನನೆದು
ಕೊಂಡೊಂದು ತಲೆಯಲ್ಲಿ ಜಿಡೆದಲೆಯ ತೆಱದೊಳಿರೆ ತನ್ನ ಮುಡಿದಲೆಯನರಿದು ।
ಮಂಡಲಾಧೀಶಂ ಪಗಲ್ಕೋಳನುಱೆ ಮೆಱೆದ
ಕಂಡ ಗಂಜಿಯ ರಸದೊಳಂ ನಾಂದ ರಜಕನಂ
ಪಾಂಡುರಂಗನ ಮೂರ್ತಿಯೊಂದೆಱಗಿದೈ ಭಲರೆ ಗಂಡುಗಲಿ ಚೇರಮಾಂಕ ॥ ೧೯ ॥

ಮೋಟ ಮಲ್ಲಂಗೆ ಕೈಯಿತ್ತ ದಸರಯ್ಯಂಗೆ
ಕೌಟಿಲ್ಯ ಜಂಗಮಾರ್ಚಕ ಸೇದಿರಾಜಂಗೆ
ಯಾಟೋಪದಿಂದಿಱದ ಕೃತಕಿ ಭಕ್ತಂಗೆಱಗಿದೇಣಾಧಿನಾಯಕಂಗೆ ।
ಚೇಟಿಯಾತ್ಮಜ ಮಲ್ಲನೆನಲವನ ಪಣೆಯೊಳ್ ಲ
ಲಾಟಾಕ್ಷಿಯಂ ತೋರ್ದ ಕಲಿಕಂಬದೇವಂಗೆ
ಮಾಟಾಯ್ತು ಚೇರಮಾಂಕಾ ನಿನ್ನ ನಿಷ್ಠೆಗಾರ್ ಸಾಟಿ ಭಲರೇಯೆಂದರು ॥ ೨೦ ॥

ಇಂತಖಿಳ ಭಕ್ತರಾನಂದದಿಂ ಕೀರ್ತಿಸಲು
ಸಂತಸದೊಳರಮನೆಯ ಪೊಕ್ಕು ಮಾಹೇಶ್ವರರ
ತಿಂತಿಣಿಗೆ ನಮಿಸೆ ಲಸದಿಷ್ಟಾರ್ಥವಿತ್ತು ಗುರುಲಿಂಗಜಂಗಮ ವಿಭೂತಿ ।
ಮುಂತೆ ರುದ್ರಾಕ್ಷಿ ಪಾದೋದಕಪ್ರಸಾದ
ಕಾಂತ ಪಂಚಾಕ್ಷರಿಗಳಷ್ಟ ಮಹದೈಶ್ವರ್ಯ
ದಿಂ ತಳ್ತು ಸಕಲ ವಿಭವದೊಳು ರಾಜ್ಯವನಾಳುತಿರ್ದನಾ ಚೇರಮಾಂಕಂ ॥ ೨೧ ॥

ಮತ್ತೆಯನುಭವಮಂಟಪಂಬೊಕ್ಕು ಚೇರಮಂ
ಕೃತ್ತಿವಾಸನ ಭಕ್ತರಾದ ಪುರಜನರ್ಗಳುಮ
ನುತ್ತಮದ ಶರಣರಂ ಪರಿಜನಂಗಳ ಕರೆಸಿ ಕುಳ್ಳಿರ್ದು ಸಿರಿರಕ್ಕೆಯ ।
ಮೊತ್ತದ ಮಹತ್ವಮುಮನಾಗಮಾರ್ಥಂಗಳಿಂ
ಬಿತ್ತರದೊಳುಸುರ್ವುದೆಂದಾಚಾರ್ಯರಂ ಕೇಳ
ಲುತ್ತರದ ಕಾಲಾಗ್ನಿರುದ್ರಂ ಸನತ್ಕುಮಾರಗೊರೆದುದಂ ಪೇಳ್ದರು ॥ ೨೨ ॥

ಕ್ಷತ್ರಿಯನೆ ಕೇಳು ಜಮದಗ್ನಿಶ್ಚ ಕಶ್ಯಪ
ಸ್ಸತ್ರಿಯಾಯುಷಮೆನಲ್ಕರುಣಿಯಂಗನೆಗಂ ಪ
ವಿತ್ರತಾಪಸ ದಧೀಚಂ ಪೇಳ್ದನಮರಮುನಿನಿಕರಮುಂ ಜ್ವಾಲಾಖುರಂ ।
ನೇತ್ರ ಕರ್ಣಾಮರಾರಾತಿಯಾ ಪಂಚಮೋ
ಡ್ರತ್ರಯಂ ಸುಟ್ಟುಗಿಳನಂಗೆಯ್ಯಲಾಗಿಯಿಂ
ತೀ ತ್ರಿವಾರಂ ವೀರಭದ್ರನಾ ಭಸಿತದಿಂ ಪೊರೆದನದಱುದಯವಿಂತು ॥ ೨೩ ॥

ಪರಮ ಸದ್ಯೋಜಾತ ವಾಮದೇವಾಘೋರ
ಪುರುಷಲಸದೀಶಾನ್ಯದಿಂ ಧರಾಂಭೋಗ್ನಿ ತ
ನ್ಮರುತ ಗಗನದಿನಾ ನಿವೃತ್ತಿ ಪ್ರತಿಷ್ಠೆ ವಿದ್ಯಾಶಾಂತಿ ಶಾಂತ್ಯತೀತೆ ।
ಉರು ಕಪಿಲ ವಸಿತಾರುಣಾಮಲಿನಚಿತ್ರಬಂ
ಧುರ ನಂದೆ ಭದ್ರೆ ಸುರಭಿ ಸುಸಿಲಾ ಸುಮನೆ
ಕರಭೂತಿ ಭಸಿತ ಭಸ್ಮಕ್ಷಾರ ರಕ್ಷಾಫಲಕ್ರಮಂಗಳನುಸುರ್ದರು ॥ ೨೪ ॥

ಮಱೆಯದೇಂ ಸಿರಿಯೆಸೆವ ಬೆಳಗು ದುರಿತಂಗಳಂ
ಕೊಱೆವೇಳ್ಗೆಯಾಪದ್ವಿಹರವಧಿಕ ರಕ್ಷಣದಿ
ನುಱುವ ಫಲವಿಂತು ಮೇಣವಲಕ್ಷಣದ ಗೋವನುಳಿದು ಸಲ್ಲಕ್ಷಣದೊಳು ।
ನೆಱೆ ತಾಳ್ದ ಪಶು ಗೋಮಯಂ ಗ್ರಹಣ ಕಬಳನಂ
ತೆಱೆದ ಶೋಷಣದಹನ ಶೋಧನನ್ಯಸ್ತವಿಂ
ದಱಿಂದಾಗಮಪ್ರಮಾಣ ತ್ರಿಪುಂಡ್ರಂಗಳ ತಳೆವುದೆಂದರು ಹಿರಿಯರು ॥ ೨೫ ॥

ರಂಗಿಸುವ ಮಧ್ಯಮಾನಾಮಿಕಾಂಗುಷ್ಠಮೆಂ
ಬಂಗುಲಿಗಳೀ ಮೂಱಱೊಳ್ ವಿರಾಜಿಸುತಮಿ
ಪ್ಪಂಗುಷ್ಠದಿಂದ ಪ್ರದಕ್ಷಿಣಂ ಮೇಣುಳಿದವೆರಡಱಿಂದಂ ದಕ್ಷಿಣಂ ।
ಕಂಗಳೊಳ್ಭಸಿತ ತ್ರಿಪುಂಡ್ರರೇಖೆಯನೆ ಮಿಗೆ
ಸಾಂಗಮಾಗಲ್ಧರಿಸಲದಱಿಂದಲಳಿವವು
ತ್ತುಂಗಪಾತಕಮೆನುತ್ತುಸುರ್ದರಾ ವಿಬುಧಸಂದೋಹವತಿಹರುಷದಿಂದೆ ॥ ೨೬ ॥

ನೀವುಸುರ್ದಿರೀ ತ್ರಿಪುಂಡ್ರದ ರೇಖೆಗಂ ಬೆರಲ
ನಾವುದಕವಗ್ನಿಬೀಜಾಕ್ಷರಂ ಗುಣವೆ ತಾ
ನಾವುದಾ ಲೋಕವಾತ್ಮಂ ಶಕ್ತಿವೇದಮುಂ ಕಾಲದಾನುಷ್ಠಾನಮುಂ ।
ಆವುದಧಿದೈವವೆಂಬುದನೆನಗೆ ತಿಳಿವಂತೆ
ಪಾವನಾತ್ಮಕರೆಯ್ದೆ ಪೇಳಿಮೆಂದಳ್ಕಱಿಂ
ಭೂವರಂ ಬಿನ್ನವಿಸಲಾಗಮಜ್ಞರ್ ನಲಿದದಂ ಕ್ರಮದೊಳಂ ಪೇಳ್ದರು ॥ ೨೭ ॥

ಚೆಲುವಾ ತ್ರಿಪುಂಡ್ರಾಂಕಿತದ ಮೊದಲ ರೇಖೆಗು
ಜ್ವಲಿಸುವಾಹವನೀಯ ಶಿಖಿಯಕಾರವೆಯುದಕೆ
ಯೊಲಿದು ಬೀಜಾಕ್ಷರ ರಜೋಗುಣ ಭುವರ್ಲೋಕವಾತ್ಮಂ ಕ್ರಿಯಾಶಕ್ತಿಯು ।
ಸಲುವ ಋಗ್ವೇದಂ ಪ್ರಭಾತದೊಳನುಷ್ಠಾನ
ಮೊಲಿದು ರುದ್ರನೆಯದಕ್ಕಧಿದೈವವೀ ತೆಱದಿ
ನಲಿದಿಡುವರೆಂದೊರೆದರವನಿಪಂಗಾ ಶಾಸ್ತ್ರಯುತರಧಿಕತತ್ವರತರು ॥ ೨೮ ॥

ಪುದಿದ ಮಧ್ಯಮರೇಖೆ ಗಾರುಹಸುಪತ್ಯಾಗ್ನಿ
ಯೊದವಿರ್ದುಕಾರ ಬೀಜಾಕ್ಷರ ತಮೋಗುಣಂ
ವಿದಿತ ಪರಮಾತ್ಮನಾ ಸುಜ್ಞಾನಶಕ್ತಿಯಾಜುರ್ವೇದ ಮಧ್ಯಾಹ್ನದಿ ।
ಪಡೆದನುಷ್ಠಾನ ಮಾಹೇಶ್ವರನಿದಕ್ಕೆ ಸ
ಮ್ಮುದದೊಳಧಿದೈವ ವಿಕ್ರಮದಿಂ ತ್ರಿಪುಂಡ್ರಮಂ
ಪಡುಳದಿಂ ಧರಿಸೆ ಮೋಕ್ಷವನೀವನಭವನೆಂದರಸಂಗೆ ಬುಧರೊರೆದರು ॥ ೨೯ ॥

ಲಕ್ಷಣದೊಳಿಡುವ ಮೂಱನೆಯ ರೇಖೆಗೆ ನಾಡೆ
ದಕ್ಷಿಣಾಗ್ನಿ ಮಕಾರಬೀಜಾಕ್ಷರಂ ನೋಡೆ
ಯಕ್ಷಯದ ಸತ್ವಗುಣವದಕೆಯಂತರ್ಲೋಕವಂತರಾಂತಕನದಕ್ಕೆ ।
ಲಕ್ಷೆದಿಚ್ಛಾಶಕ್ತಿ ಸಾಮವೇದಂ ಸಂಧ್ಯೆ
ಗೀಕ್ಷಿಸಲನುಷ್ಠಾನವಾಸದಾ ಶಿವನಧಿಪ
ನುಕ್ಷಪತಿಯಾ ತ್ರಿಪುಂಡ್ರಮನಿಡಲ್ ಮೋಕ್ಷಮುಮನೀವನೆಂದೊರೆದರಂದು ॥ ೩೦ ॥

ಬಹುತಪದ ಫಲವೊಂದು ಸೋಮವಾರದ ಪೂಜೆ
ವಿಹಿತದಿಂ ಮಿಗಿಲೆಂದು ಕೌಶಿಕವಸಿಷ್ಠರಾ
ಸಹಜಮುನಿಗಳ ಕೇಳಿ ಕಡಮೆಯಾಗಕ್ಕೆ ವಿಶ್ವಾಮಿತ್ರನುದ್ರೇಕದಿಂ ।
ಅಹಿತಭೂತಮನಟ್ಟಿಯುದಱ ಸುಯಿಲಿಂ ಶುಭಾ
ವಹನಣುಗರಂಗಯ್ಯ ಭಸಿತಮುಗೆ ಪೊಡೆದುದೆನೆ
ಮಹಿಯೊಳಂ ಬೀಳದಂತಾ ವಿಭೂತಿಯ ಧರಿಸಬೇಕೆಂದರಾಚಾರ್ಯರು ॥ ೩೧ ॥

ಇತಿಹಾಸಮುಂ ಪುರಾಣಾಗಮುಂ ರುದ್ರನಂ
ಶತಸಹಸ್ರಂ ಯಜಿಸಿದಾ ಫಲಮುಮೇಕವಿಂ
ಶತಿ ಮಾತೃಪಿತೃಗಳ ಪವಿತ್ರರಂ ಮಾಳ್ಪರಾ ಸರ್ವತೀರ್ಥ ಸ್ನಾನವ ।
ಅತಿಶಯದೊಳಂ ಮಾಡಿದಾ ಫಲಂ ದೇಹಮಂ
ಕ್ಷಿತಿಯೊಳಂ ಬಿಡೆ ಶಿವನ ಸಾಯುಜ್ಯಪದವನು
ನ್ನತದೊಳೆಯ್ದುವರಿದುಂ ತಪ್ಪದೆಂದುಸುರ್ದರರಸಂಗೆ ಶಾಸ್ತ್ರಜ್ಞರಂದು ॥ ೩೨ ॥

ದೇವನ್ನೈಮೊಗವನದಱೊಳಗೊಗೆದ ತತ್ವಮುಮ
ನಾ ವಿಮಲ ತತ್ವಸಂಭವ ಕಲಾಪಂಗಳಂ
ಭಾವಿಸಲ್ಕವಱ ವರ್ಣಂಗಳಂ ಗೋಮಯಕೃತಂಗಳಂ ಭಸಿತಂಗಳಂ ।
ತೀವಿರ್ದ ತತ್ತ್ರಿಪುಂಡ್ರಾಂಕಿತಂಗಳನೆಸೆವ
ಪಾವನದ ಪಣೆಯೊಳಿಡುವಂದವಂ ಫಲತತಿಯ
ಭೂವರಂಗಾಗಮಜ್ಞರು ಪೇಳಿದರು ಹರುಷದಿಂ ಕೇಳಿ ಪುಳಕಿಸಿರ್ದ ॥ ೩೩ ॥

ಇಂತೀ ವಿಭೂತಿಯ ಮಹತ್ವಂಗಳಂ ಕೇಳಿ
ಸಂತಸದೊಳಂ ತನ್ನ ದೇಶದೊಳಗುಳ್ಳರಂ
ಕಂತುಹರಭಕ್ತರಂ ಮಾಡಿ ಶಿವನಿಳೆಯ ಪೂಜಾಭೋಗಮಂ ಪೆರ್ಚಿಸಿ ।
ಅಂತಲ್ಲಿ ಸಕಲ ಮಾಹೇಶ್ವರರ ಸೇವೆಯಂ
ಕುಂತಾಗದಂತೆ ಮಾಡಲು ಚೇರಮಕ್ಷಿತೀ
ಶಾಂತನರ್ಥಂ ಸವೆಯಲರಿವೀಸವಿಲ್ಲದಿರಲೀಶನಂ ನೆನೆಯಲಾಗ ॥ ೩೪ ॥

ಆತನುನ್ನತ ಚಿಂತೆಯೇ ತನ್ನ ಚಿಂತೆಯಂ
ದಾತುರದೊಳಾ ಶಿವಂ ನಿಂಬಿಯಕ್ಕಂಗೆಯಾ
ಭೂತಳೇಶಂ ಚೋಳ ಬಸವ ಮೊದಲಾದರ್ಗೆ ಪೊನ್ನರನ್ನದ ಮಳೆಗಳಂ ।
ಪ್ರೀತಿಯಿಂ ಕಱೆದವೊಲ್ಭಕ್ತಚಿಂತಾಯುಕಂ
ಸಾತಿಶಯದಿಂ ಮಿಸುನಿ ಕೆಮ್ಮಣಿಯ ಮಳೆಗಳುವ
ನೋತು ತಿರುವಂಜಕಳದೊಳ್ಚೇರಮಂಗೊಲ್ದು ಕಱೆದನೇವಣ್ಣಿಸುವೆನು ॥ ೩೫ ॥

ನೆಱೆ ವಸುಂಧರೆ ರತ್ನಗರ್ಭೆಯೆಂದೆಂಬ ಪೆಸ
ರುಱುವ ನುಡಿಯ್ಯೆಸೆ ನೀಂ ಚಿನ್ನಮಂ ರನ್ನಮಂ
ಮಱೆಸಿಕೊಂಡಿರ್ಪೆಯಲ್ಲದೆ ಪೇಳೆ ಬಯಸಿದರ್ಗೊಂದುದಿನಮಿತ್ತುದಿಲ್ಲ ।
ಉಱದೆನ್ನ ನೋಡೆಂದು ಮೂದಲಿಸಿ ಮೇಘವಂ
ದೆಱಕದಿಂ ತಿರುವಂಜಕಳದೊಳಗೆ ಸುರಿದುದ
ಕ್ಕಱೊಳಂದು ವೀಥಿವೀಥಿಯೊಳೆ ಭಕ್ತರ ಗೃಹಾಂಗಣವೆಲ್ಲ ತುಂಬುವನ್ನಂ ॥ ೩೬ ॥

ಮನ್ನಾಥನೊಲ್ದು ಕಾರುಣ್ಯದಿಂದೆನಗೀಗ
ಪೊನ್ನರನ್ನದ ಮಳೆಗಳಂ ಕಱೆದನೆಂದುರ್ವಿ
ತನ್ನ ಭಂಡಾರದಾವಾಸವೆಲ್ಲಂ ತುಂಬಿ ತುಳ್ಕಾಡುವಂತೆ ಪೊಯಿಸಿ ।
ಮನ್ನಣೆಯ ಭಕ್ತರಂಗಣದೊಳಲ್ಲಲ್ಲಿರ್ದು
ದನ್ನಲಿದುಷ್ಟನೀವೆ ಕೈಕೊಂಡು ಶಿವಸೇವೆಗಳ
ನುನ್ನತದೊಳಂ ಮಾಳ್ಪುದೆಂದು ತತ್ಪುರದೊಳಗೆ ಸಾಱಿ ಡಂಗುರವೊಯಿಸಿದಂ ॥ ೩೭ ॥

ಅವರವರ ಮನೆಯಂಗಣದೊಳಿರ್ಪ ವಸ್ತುಗಳ
ನವರವರು ಕೈಕೊಂಡು ಸುಲಭಸದ್ಭಕ್ತಿಯಿಂ
ಶಿವಸೇವೆಯಂ ಮಾಡುತಿರೆ ನೋಡಿ ಹರುಷಿಸುತ ಚೇರಮಂ ಸುಖದೊಳಿತ್ತ ।
ಸವಿಲಾಸದಿಂದಿರಲ್ಕತ್ತಲಾ ಪಾಂಡ್ಯನೃಪ
ನವನಿಯೊಳಗಮರಾಪುರದ ಬಾಲವಕ್ತ್ರೇಶ
ಭವನೊಪ್ಪುತಿರಲಧಿಕ ವಿಭವದಿಂ ಭದ್ರಗಾಯಕನಲ್ಲಿಗೆಯ್ತಂದನು ॥ ೩೮ ॥

ರಾಯರಾಯನ ಸುಖಂ ಸಕಲಮನುಮುನಿದೇವ
ರಾಯರಾಯನ ವಿಭವದೋಲಗಕ್ಕಾ ಭದ್ರ
ಗಾಯಕಂ ಬಂದು ಸಾಷ್ಟಾಂಗದಿಂದಂ ದಂಡಪ್ರಣಾಮಮಂ ಮಾಡಿ ನಿಂದು ।
ಓಯರದೊಳಂ ದಂಡಿಗೆಯನಾಂತು ದನಿದೋಱೆ
ಯಾಯತದಿ ಷಡ್ಜಪಂಚಮದ ಕಟ್ಟಳೆಗೂಡಿ
ಧ್ಯಾಯವನಿಗಾಶ್ಚರ್ಯವೆಂಬಿನಂ ಪಾಡಲುದ್ಯೋಗಿಸಿದನೇನೆಂಬೆನು ॥ ೩೯ ॥

ಸೂರೆ ತೊರೆದ ಮೇಘವಂತಾ ಷಡ್ಜ ಪಂಚಮ
ಸ್ವರವೆ ಸಿಡಿಲಾ ಹೊಳಹೆ ಮಿಂಚು ಬಣ್ಣದಿನೆಸೆವ
ಕರೆಯಿಂದ್ರಚಾಪವಾ ಬಿಗಿದ ಧಾರೆಗಳೆ ಕಾಲೂಱಿಳಿವ ವಾರಿಧಾರೆ ।
ವರನೀಲಕಂಠನಾನಂದವೇ ನವಿಲಾಟ
ಉರು ಬುಧರ ಕಿವಿಯೆ ಚಾತಕಮಾಗೆ ಗಾನದೊಳ್
ಸರಿಗಳಮೃತಂಗಱೆದನಾ ಭದ್ರಗಾಯಕಂ ಗಾಯಕರ್ಗಧಿನಾಯಕಂ || ೪೦ ||

ವರಮಂದ್ರಮಧ್ಯತಾರದೊಳೊಗೆದುವಂತೇಳು
ಸರವಾ ಸರಂಗಳಿಂದೇಕವಿಂಶತಿ ಸರಂ
ಪರಿಮಿತದಿ ಪುಟ್ಟಿದವು ವಾಸರಂಗಳ್ಮುಟ್ಟೆ ನಯ ಬಜಾವಣೆ ನೇವಣೆ ।
ಉರುತರದ ಗತಿಗಮಕ ಲಹರಿಯಾ ಸಂಚ ಡೊ
ಕ್ಕರದಿಂದೆ ತಾನಮಾನಂಗಳಿಂ ಪಾಡಿ ಶಂ
ಕರನ ಸುಖಸರಧಿಯೊಳ್ಮುಳುಗಿಸಲ್ ಮೆಚ್ಚಿದಂ ದೇವನಾನತರ ಜೀವಂ || ೪೧ ||

ಶಂಕರಯ್ಯನ ಭೃತ್ಯನೆಂದು ವೈರಿಯು ತಗುಳಿ
ತಾಂ ಕೂಡೆ ಪಾಡಿಸುವ ತೆಱದಿಂದಯಃಪೂತಿ
ಯಂ ಕರಸಿ ಕೈಲಾಸಮಂ ಕೂಡೆ ಪೊನ್ನಾಂಬಲಂ ಮಾಡಿ ಸರ್ವೇಶನೆ ।
ಬಿಂಕದಿಂ ವಾಗೀಶನಾಗಿ ಪಾಡಿಸುವಂತೆ
ಮುಂ ಕಿನ್ನರನ ಮಾದಿರಾಜರಗ್ಗದ ಗೀತ
ಮಂ ಕೇಳುವಂದದಿಂ ಭದ್ರಗಾಯಕನ ಗಾನವನಾಲಿಸುತ ಮುಚ್ಚಿದಂ || ೪೨ ||

ಸಸಿದಲೆಯನಾ ಭದ್ರಗಾಯಕಂಗಂ ಮೆಚ್ಚಿ
ಮಿಸನಿಗಾಸೊಂದೀಯೆ ಕೊಂಡು ಬರುತಂ ಕಾಸ
ನೊಸೆದು ಪಥದಲ್ಲಿ ಶರಣರ್ಗೆ ಶರಣೆಂದು ತನ್ನಯ ಗೃಹಂಬೊಕ್ಕು ನಿಚ್ಚಂ ।
ಅಸಮಾಕ್ಷನಿತ್ತ ಕಾಸಂ ಜಂಗಮುಕ್ಕೆ ಸಂ
ತಸದಿಂದಲೀವುತ್ತೆ ಸುಜ್ಞಾನದಿಂದಿರಲು
ವೊಸೆದಾತನರಸಿ ತರಹರಿಸಲಾಱದೆ ನೊಂದು ನುಡಿದಳಾ ನಿಜಪತಿಯೊಳು || ೪೩ ||

ಮೇರುಮಂದಿರನೊಲವುಗಡ ಮಿಸುನಿಗಾಸೊಂದು
ದಾರವೆ ಶಿವನ ವರವೆತ್ತಲಂಬಲಿಯೂಟ
ವೋರಂತಿರೆಮಗೆತ್ತಲಿನವೇವುದಂ ಬಿಡಿಸದವನೆಂತು ಮುಕ್ತಿಯೀವಂ ।
ಮಾರಮರ್ದನನೆಂದು ದಿನದಿನಂ ಕರಕರಿಸಿ
ಘೋರನಾ ಮೃಡನೆಡೆಗೆ ಪೋಗಿ ಪಾಡಿದೊಡಂದು
ಕಾರುಣ್ಯದಿಂ ಕೊಟ್ಟ ಕಾಸುಮಂ ಕೈಕೊಂಡು ಭಯಭಕ್ತಿಯಿಂ ನಿಂದಿರೆ || ೪೪ ||

ತಡದೆಯೇಂ ಭದ್ರಗಾಯಕ ಪೇಳು ಪೇಳೆನಲು
ಪಡಿ ಸಾಲದೆಂದು ದೇವರ ತೊಳ್ತು ನುಡಿಪಳಿಂ
ದೊಡನೊಡನೆ ಭೀತಿಯಿಂ ಬಿನ್ನವಿಸಲೀಶ್ವರಂ ನಸುನಗುತೆ ಸಂತಸದೊಳು ।
ಕಡುಕೂರ್ಮೆಯಿಂ ಚಿನ್ನರನ್ನಭಂಡಾರಮಂ
ಬಿಡೆ ವಸ್ತ್ರಮುಖ್ಯವಸ್ತುಗಳನೊಲವಿಂ ಕೊಟ್ಟು
ಪೊಡವಿಪತಿ ಬೀಳ್ಕೊಡುವುದೆಂದು ರಾಯುಸವಿತ್ತು ಕಳುಪಲಾ ಸದ್ಭಕ್ತನು || ೪೫ ||

ಬಂದು ಚೇರಮರಾಯಗಾ ರಾಯುಸವನೀಯ
ಲಂದು ಕೈಮುಗಿದು ತೆಕ್ಕೊಂಡು ಕಣ್ಗೊತ್ತಿ ಶರ
ಣೆಂದು ತಾಂ ಸ್ವಸ್ತಿ ಭಕ್ತರ ಜೀವನೆನಿಸುವಾ ಶ್ರೀಬಾಲವಕ್ತ್ರೇಶ್ವರಂ ।
ಛಂದದಿಂ ಚೇರಮಂಗಿತ್ತ ರಾಯುಸವದಾ
ನಂದದಿಂ ಭದ್ರಗಾಯಕಗಧಿಕ ವಸ್ತುಗಳ
ನಿಂದೋದಿಕೊಳುತಲೀವುದು ನಂದಿಯೊಪ್ಪವೆನೆ ಹಿಗ್ಗಿ ಪೊರೆಯೇಱುತಿರ್ದಂ || ೪೬ ||

ಓದಿ ಸಂತೋಷಿಸುತ್ತಾಂ ಕೃತಾರ್ಥಂ ಭಾಪು
ಮಾದೇವ [ದೇವ] ನೀನೆನುತ ವಂದಿಸುತ ಸ
ಮ್ಮೋದದಿಂ ಭದ್ರಗಾಯಕಗೊಸ್ತು ನಿಳಯ ಧನಕನಕ ವಸ್ತ್ರಾಭರಣದ ।
ಆದಿ ಭಂಡಾರವೆಲ್ಲವನೊಪ್ಪಿಸುತ್ತಲಿ
ನ್ನೀ ದೇಶಮುಖ್ಯವಾನೆನ್ನ ಗೋತ್ರಂಸಹಿತ
ಸಾದರದಿ ನಿನ್ನಾಳ್ದಳೆನೆ ಪೊಕ್ಕು ಬರುತ ಚಿದ್ಭಸಿತಗೇಹಂಗಂಡನು || ೪೭ ||

ಓರಂತೆ ಬೆಳ್ಳಿವೆಟ್ಟನ ಬೆಳಗನಾ ಪುಣ್ಯ
ಸಾರದೊಬ್ಬುಳಿಯ ವೃಷಭೇಶ್ವರನ ಮೈಸಿರಿಯ
ಚಾರು ಚಿತ್ಪಿಂಡದನ್ನುತ ವಿಮಲದೀಧಿತಿಯನಿಂಗದಿರನಂಗದೊಳ್ಪ ।
ಪೂರೈಸಿ ಕರುವಿಟ್ಟ ತೆಱದಿ ಧಳಧಳಿಸುತಿ
ರ್ಪಾ ರಮ್ಯ ಭಸಿತರಾಸಿಯಃ ಕಂಡು ಮನದೊಳಗೆ
ಹಾರೈಸಿ ಹರುಷದಿಂ ಪೊಱಗಟ್ಟಿ ಶಿರದೊಳಂತೊಡನೊಡನೆ ನುತಿಗೆಯ್ದನು || ೪೮ ||

ಮೇರುವಂ ಬಿಟ್ಟು ಜಲಗಂ ತೊಳೆವನಂತೆ ಸುರ
ಭೂರುಹವನುಳಿದು ಮುಳುಮರನ ಸಾರ್ದಂತವರ
ವಾರಿಯೊಳ್ಮುಳುಗದಾ ಕೊಳಚೆನೀರೊಳಗೆ ಮಿಾವವನಂತೆ ಮಿಗೆ ನಿರ್ಜರ ।
ಸಾರಥೇನುವಿನ ಪಾಲ್ಗೊಳ್ಳದಂಬಿಲಕೆ ತಾಂ
ಹಾರುವಂತೀ ಭಸಿತಮಂ ಬಿಟ್ಟು ಬಱದೆ ನಾಂ
ಸೇರುತಿರ್ದೆಂ ಕರಿಣಪಾಷಾಣತತಿಗೆಂದು ಭೂತಿಯಂ ಪೊಗಳುತಿರ್ದಂ || ೪೯ ||

ಭೂವರಂ ಕೊಟ್ಟಖಿಲ ವಸ್ತುಗಳನುಳಿದು ತಾಂ
ಪಾವನ ವಿಭೂತಿಯಂ ಕಂಡುಬ್ಬಿ ಕೊಬ್ಬಿ ಸ
ದ್ಭಾವಿಯಪ್ಪಾ ಭದ್ರಗಾಯಕಂ ಪೊಱಗಟ್ಟಿಕೊಂಡೊಯ್ಯುತ್ತಿರಲು ನೃಪತಿ ।
ಆ ವಿಮಲಮತಿಗೆ ಸಂತಸವಟ್ಟು ಮುಚ್ಚಿ ತಾ
ನೋವಿ ಮುದಕರಿವೊಟ್ಟಿಗಳೊಳಧಿಕ ವಸ್ತುವಂ
ಕೀವಿ ಹೇಱಿಸಿ ಕಳುಹಿದಂ ಭಕ್ತಿಯಿಂದಲಂದವನಿಪ್ಪ ನಗರಿಗಂದು ॥ ೫೦ ॥

ನೆಲವೆಣ್ಣರಸರಲ್ಲಿ ಜಯಸಿರಿಗಳಂ ಬೇಡ
ಲೊಲವರದೊಳಾಳ್ವನೆಂದೀಯದಿರೆ ಮುತ್ತವರ
ತಲೆಯೊಳಗೆ ಪಿಡಿದ ಬಲಗಯ್ಯ ಬಾಣಂ ಮುಡಗಲಿಯ್ಯೆಸರಿಗಾಡಾಳದೆ (?) ।
ಗೆಲವೆಂಬಿನತಿ ಮೋಹದಿಂದಪ್ಪಿಯೊಡವಂದ
ಲಲಿತಾಂಗಿಯಂ ಪಲರ್ಗಿತ್ತೆಮ್ಮವಂ ತಂದು
ಬೆಲೆವೆಣ್ಣೆನುತ್ತೆ ನೂಂಕಿದನೆಂದು ಗೋವರ್ಧನ ಕೀರ್ತಿವಧು ದೂಱುತಿಹಳು ॥ ೫೧ ॥

ಮಣ್ಣೆಸವನೀರ್ತ್ತಗರ್ದೇರನೆಲರಾಗಸಂ
ತಣ್ಣಸವರಿಜನುರಿವ ನೇಸಱುಸುರೊಳಗಾದ
ತಿಣ್ಣವೆನಿಪೆಂಟು ಮೆಯ್ಯೊಡೆಯಂಗೆ ಪಲಗಣ್ಣ ಮರಗೂಳರಾ ಜಗುನೆಯು ।
ಅಣ್ಣ ರಕ್ಕಸ ನೆಗಳ್ದೇರರಾ ಗಾಳಿಯುರೆ
ವೆಣ್ಣನೊಳ್ಗೆಳೆಯನೀಶಂಗೀಶನಾದಕಾ
ಲ್ಗಣ್ಣಂಗೆ ಮೆಱೆವ ಮುಕ್ಕಣ್ಣಂಗೆ ಮಿಸುಪ ಬೆಳರ್ವಣ್ಣಂಗೆ ತುಳಿಲ್ಗೆಯ್ವೆನು ॥ ೫೨ ॥†

ಇದು ಸಕಲ ಭಕ್ತಪದಪದ್ಮ ಮಧುಕರ ಪುಣ್ಯ
ಸದನ ಗುಬ್ಬಿಯ ಮಲ್ಲಣಾರ್ಯರ ಕೃಪಾಪಾತ್ರ
ಮುದಿತ ನವರಸ ಭಾವ ಲಕ್ಷಣಾಲಂಕಾರನಿಪುಣನೆಂದೆನಿಸಿ ಮೆಱೆವ ।
ಚದುರಚೇರಮನೊರೆದ ಚೇರಮಚರಿತ್ರಮಂ
ಪದಪಿಂದ ಬರೆದೋದಿ ಕೇಳಿ ವಿಸ್ತರಿಸುವ
ರ್ಗೊದಗಿರ್ಪುದಾಯುರಾರೋಗ್ಯಸಂಪದ ಸರ್ವಸಿದ್ಧಿ ಸತ್ಯಂ ತಥ್ಯವು ॥ ೫೩ ॥



* 'ಗ' ಪ್ರತಿಯಲ್ಲಿ ೫೧ನಯ ಪದ್ಯವಿಲ್ಲ. † ೫೨ನೆಯ ಪದ್ಯ ೧೧ನೆಯಸಂಧಿ ಸೂಚನೆಯಾಧ ಮೇಲೆ ಬಂದಿದೆ.

# ಏಳನೆಯ ಸಂಧಿ

**ಸೂಚನೆ :**
ಚಾರುಚೈತ್ರಂ ಬರಲು ಪೋಗಿ ವನಕೇಳಿಯಂ
ನಾರಿಯರುಸಹಿತಲೊಡರಿಚಿ ತಿರಿಗಿಬಂದಲ್ಲಿ
ಚೇರವಂ ರಾತ್ರೀವಿಹಾರಕೆಂದರಮನೆಯ ಪೊಱಮಡಲ್ಕನುವಾದನು ॥

ಝುಗಝುಗಿಸುವಚ್ಚ ಕೆಂಗದಿರ್ಗಱಿವ
ಪಗಲಿರುಳೆಱಿಯರೆನಿಸುವಚ್ಚಿಗಳ ಬೆರಕೆವೆಳ
ಗುಗಳ ಸೋಂಕಿಂದರೆವಿರಿದ ಪೊನ್ನ ತಾವರೆಯ ಮಾಳ್ಕೆಯಿಂ ಮೆಱೆವ ಮುಗುಳು ।
ನಗೆಯೊಡನೆ ಕೂಡಿಯೆಡೆವಿಡದೆ ರಯ್ಯಂಬೆತ್ತ
ಮೊಗದ ಮೋಹನದ ಮದ್ವರ ಭೋಗಮಲ್ಲೇಶ
ನಗಲದೆನ್ನಯ ಹೃದಯಮಧ್ಯದೊಳ್ ನೆಲೆಗೊಂಡು ರಕ್ಷಿಸುಗೆ ಮೂಲೋಕಮಂ ॥ ೧ ॥*

ಇಂತಮಲ ಭದ್ರಗಾಯಕಗಿಷ್ಟವೈಶ್ವರ್ಯ
ಮಂ ತೀವಿ ಕಳುಪಿ ತಿರುವಂಜಕಳನಾಥನಂ
ಸ್ವಾಂತವಾಕ್ಕಾಯಕದೊಳರ್ಚಿಸುತ ಪರಮವೈಭವದಿಂದೆ ಧರಣೀಶರ ।
ಸಂತತಿಗಳೋಲೈಸಲಖಿಲ ಭೂಮಿಯೊಳುಳ್ಳ
ಸಂತರಂ ಪಾಲಿಸುತ ವೀರವಿತರಣಗುಣದ
ಸಂತಸದೊಳಾ ಚೇರಮಾಂಕನೊಪ್ಪುತ್ತಿರೆ ವಸಂತಕಾಲಂ ಬಂದುದು ॥ ೨ ॥

ಘನವಾದ ಮಾಗಿಯೋಡಿತ್ತು ಸವಿಯಪ್ಪ ಮಾ
ವಿನ ತಳಿರ್ ಮೂಡಿತ್ತು ಕೋಕಿಲಕುಲಂ ಮಿಸುಗು
ವಿನಿದು ಸರದಿಂದ ಪಾಡಿತ್ತು ಬಂದುದು ಚೈತ್ರವಖಿಳಜನಸುಖದ ನೇತ್ರ ।
ವನಪಾಲನಂತದಂ ಕಂಡು ನಡೆಗೊಂಡು ಸೊಂ
ಪಿನ ಪಣ್ಣರಲ್ದಂದು ನೃಪಗೆ ಶರಣೆಂದು ಭೋಂ
ಕನೆ ಮುಗಿದಕೈಯ್ಯೊಳಿದಿರೊಳ್ನಿಂದು ಬಿನ್ನೈಸಿದಂ ಬನಕೆ ಬಪ್ಪುದೆಂದು ॥ ೩ ॥

ಮಿಸುಪ ಹೊಂಗೇದಗೆಗಳೆಸಳ ಸುರಗಿಯನು ಝಳ
ಪಿಸಿ ಮದನಮಂತ್ರಿ ಬನಮಂ ಮುತ್ತಿದಂ ಮೃಗ
ಮಸೆದುಕೊಳುತವೆ ಶುಕಂ ಮರನೇಱಿ ಕೂಗಿ ಹುಯ್ಯಲ ತೆಗೆವುತವೆ ಕೋಗಿಲೆ ।
ಹಸುಳೆದುಂಬಿಗಳು ಮಧುಪಾನಮಂ ಮಾಡಿ ಕೋ
ಪಿಸಿ ಬಱಿದೆ ಮೊರೆವುತವೆ ತರಹರಿಸಲರಿದು ದರ
ಹಸಿತಾಸ್ಯ ಗಾಳಿಧಾಳಿಯ ಬಂದವೆಂದು ಬನವಳಿಗನರಸಗೆ ದೂಱಿದಂ ॥ ೪ ॥

---
* 'ಗ' ಪ್ರತಿಯಲ್ಲಿ ಈ ಪದ್ಯವಿಲ್ಲ.

ಕೇಳುತೆರಡನೆಯ ಮನ್ಮಥ ಕೇರಳಾಧಿಪ ನೃ
ಪಾಲನೆಂದಂ ಮುನ್ನ ಬೆಂದ ಸೌಸವಗಣೆಯ
ನಾಳುತನವೆನ್ನಿದಿರೊಳೇ ಶಿವನ ಪಲ್ಲಮುಱಿಗೆಣೆಯೆ ಮದ್ರಾಜ ಗೃಹದ ।
ನೀಳಕುಂತಳೆಯರೇ ಸಾಲಂದಣದೊಳು ಮುಂ
ದಾಳಿಯಂ ಪೋಗೆಂದು ಶಂಕರಾರ್ಚನೆಯ ರತಿ
ಕೇಳಿಗೊಳ್ಳಿತ್ತಿದೇ ವೇಳೆಯೆಂದಧಿಕ ಸಮ್ಮೇಳನದಿ ಬನಕೆ ನಡೆದಂ ॥ ೫ ॥*

ರಸವೊಸರುತಿಹ ದಾಡಿಮದಿ ತೀಡುತಿರ್ಪ ತ
ಣ್ಣಸಗಾಳಿಯಿಂದೆ ದೆಸೆದೆಸೆಗೆ ಕಂಪಂ ಕೂಡೆ
ಪಸರಿಸುವ ಪುಷ್ಪಂಗಳಿಂದೆ ವಿಭವಂಗಳಿಂದುಲಿವ ಶುಕಪಿಕನಿಕರದ ।
ಎಸೆವ ದನಿಯಿಂದಾದಿರತಿದೇವಿ ಕಾಮನಂ
ದೊಸೆದು ಚೇರಮಮಹೀಶ್ವರನನಿದಿರ್ಗೊಂಬಂತೆ
ಪೊಸವನಂ ರಾರಾಜಿಸಿತ್ತು ಸೌಖ್ಯದಗೊತ್ತು ಸಂತಸಮನೆಯ್ದೆ ಪೊತ್ತು ॥ ೬ ॥

ಶೂರಕುಲಸಂಭವ ಯಯಾತಿ ಬೇಂಟೆಯೊಳಾ ಕು
ಬೇರನ ವನಂಬೊಕ್ಕು ಜಲಕೇಳಿಯಾಡುತಿಹ
ಗೌರಿಯಾಳಿಯರು ಶಾಪಿಸಲು ಗಂಡುಡುಗಿ ಪೆಣ್ಣಾಗಿ ಗುರುಸತಿಯು ನೆರೆದ ।
ಪಾರದಾಧಿಕ ಚಂದ್ರಪುತ್ರ ಬುಧನಂ ವರಿಸಿ
ನಾರಿಯಂಗಜ ಸೋಮವಂಶವಾದಾ ಬಗೆಯ
ಭೂರಮಣನಂತಲ್ತು ಗಂಡರಿಗೆ ಗಂಡನಾ ಚೇರಮಂ ಬನವೊಕ್ಕನು ॥ ೭ ॥

ಆಡಲೇಂ ತಮ್ಮ ಕೆಂಬಿತ್ತುಗಳವೀ ಬರ್ಪ
ಗಾಡಿಕಾರ್ತಿಯರಧರಂಗಳ್ಗೆ ಪಡಿಯೆಂದು
ನಾಡೆ ಕವಿಜನವುಸುರ್ದೊಡದಕೆ ಮುಳಿದಬಲೆಯರು ಗಿಳಿವಿಂಡುಸಹಿತ ಧಾಳಿ ।
ಮಾಡಿದಪರೆಂದಳ್ಕುತವರ ಮೆಯ್ಸೋಂಕಲ
ತೀರ್ಡೆ ಕಂಪಿಸಿ ಬಯಲ್ಗೆ ಬಾಯ್ವಿಟ್ಟು ಪಲ್ಗಿರಿವ
ಪಾಡೆಂದೆನಲ್ಕೆಯಾ ವನದೊಳರೆವಿರಿದೆಸೆವ ದಾಡಿಮಂಗಳ್ ಮೆಱೆದವು ॥ ೮ ॥

ಶ್ರೀರತ್ನಗರ್ಭಾಂತರದೊಳು ಜಂಬೂದ್ವೀಪ
ವೋರಂತೆ ಮೆಱೆವುದದಱನ್ವರ್ಥನಾಮದಿಂ
ಸೇರಿ ಪಲಕೆಲವು ವೃಕ್ಷಂ ಪುಟ್ಟಿದವಱೊಳಿರ್ದಾ ರನ್ನವಸುಱುವೆಸರಂ ।
ಧಾರುಣಿಯುಱಿಯೆ ಪಡೆದು ತೋರ್ಪನೆಂಬಧಿಕವಿ
ಸ್ತಾರದಿಂ ಪಸುರ್ಗೆಂಪು ಮಿಸುಪಿಂದ್ರನೀಲದಾ
ಕಾರದಿಂ ಫಲತತಿಗಳಿಡಿದಿರ್ದ ನೇಱಿಲಾ ವನದೊಳಗೆ ಕಣ್ಗೆಸೆದವು ॥ ೯ ॥

---

* 'ಗ' ಪ್ರತಿಯಲ್ಲಿ ೫ನೆಯ ಪದ್ಯವಾದಮೇಲೆ "ಇದು ರತಿದೇವಿಯೆಂಬ ನಾಮಗೋಪ್ಯದ ಪದ" ಎಂಬ ಗದ್ಯವಿದೆ.

ಚಂದಿರಗದಿರ್ದಂಪಸನಬಲಾರುಣಾಧರದ
ಮಂದರಾಗದ ರುಚಿಯನೆಳವೆಣ್ಣ ನಲ್ಲೂಟ
ದಿಂದಾದ ಸೊಗಸನಾ ಸತ್ಯವೀಶ್ವರರ ವಾಕ್ಯಾಮೃತದ ಮಾಧುರ್ಯವ ।
ಛಂದದಮರರ ಧೇನುವಿನ ಸುಧೆಯ ಸವಿಯನಿವ
ನೊಂದುಗೂಡುತ ಚೈತ್ರನೆಂಬ ಪರಮೇಷ್ಠಿ ಸಿರಿ
ಗಂದಗೆಂದೀಯುಪವನದೊಳಿಟ್ಟನೆನೆ ರಸಾಲದ ಪಕ್ವಫಲಮೆಸೆದವು ॥ ೧೦ ॥

ಮಿಸುನಿದಗಡುಗಳ ಮಿಗೆ ಸುರಳ್ದು ಮೃದುಮಧುರತೆಯು
ನೊಸೆದಿತ್ತು ಕಂಪೂಡಿಯುದಱೊಳಗೆ ನೆಱೆಯಮೃತ
ರಸವನೊಯ್ಯನೆ ತೀವಿ ಸಲೆ ಚೈತ್ರನೆಂಬಜಂ ಪೊಸಪಟ್ಟಸಾಲೆಯೊಳಗೆ ।
ಮಸಕದಂತವನಿಡುತ್ತವಱ ಮೇಲ್ ಬಳಸಿನೊಳ್
ಪಸುರ್ಮುಗುಳ್ಪಿಲ್ಲಿಗಳ ಮದನ ನೃಪಗೆಂದು ಸೇ
ರಿಸಿ ಬೈತ ಬೋನಗುಡಿಕೆಯ ತೆಱದಿ ಸಾಲ್ವಿಡಿದ ವನಸತತಿ ಮೆಱೆದವು ॥ ೧೧ ॥

ಹರಶರಣರಂ ಕಂಡು ತಲೆವಾಗಿ ಮಿಗೆ ಪೊಂಗಿ
ಪೊರೆಯೇಱ ಪಿರಿದಾಗಿ ಬಾಳಲೇವೇಳೆಂಬ
ಪರಮಭಕ್ತರ ತೆಱದ ರಂಭಾಕುಜಂಗಳಿಂ ಪರಿಪರಿಸಿ ಹಳೆವೆಣ್ಣನು ।
ಶಿರದೊಳಗೆ ಮುಕ್ಕಣ್ಣನಾಳುತೆಳನೀರ್ವೆಣ್ಣ
ಧರಿಸಿ ಪಸಿವರೆಯುದೊಳು ಸ್ಥಾಣುರೂಪಿಂದೆ ಶಂ
ಕರನಿಳೆಗಿಳಿದನೆನಲ್ ಮೆಱೆದವಾ ಫಲ ನಾಳಿಕೇರವತಿಸುಖದ ಮೇಳ ॥ ೧೨ ॥

ಇಂಗಡಲ ಸುರರು ಕಡೆವಲ್ಲಿ ಚಿಮ್ಮಿದ ತುಷಾ
ರಂಗಳೊಳ್ದಿರುಳುದೊಳೆಗಳಂ ತಂದು ಜೋಡಿಸು
ತ್ತಂಗಜಾಮಾತ್ಯನುಱೆ ಚೆಂಬೊನ್ನ ಗಿಣ್ಣಲ್ಗಳೊಳ್ಕಾಡೆ ಮದನಗೆಂದು ।
ಹಿಂಗದೀಯುಪವನಾಂತರದ ಶಾಖೆಗಳೊಳಗೆ
ಕಂಗೊಳಿಸಿ ಬೈತನೋ ತಾನೆನಲ್ ಮೆಱೆದವತಿ
ರಂಗುವಡೆದಿರ್ದ ಕಿತ್ತೀಳೆವಣ್ಗಳು ಮನಂ ನೋಡುತಿರೆ ನಲ್ವೆಣ್ಗಳು ॥ ೧೩ ॥

ಪಱಮೆವಱ ಪರಸಿಕೊಂಡಱದು ಬರೆ ಸುಗ್ಗಿಯುಂ
ತುಱುವ ಪೂಗೊಳನೊಳಗೆ ಪೊಕ್ಕು ಮೆಯ್ಯೊಳ್ತಳೆದು
ನಱುಗಂಪಿನಲರ್ಪುಡಿಯನೆಱಗಿ ಮಾಮರಕೆ ರತಿಯೆಱೆಯನಿಹ ತಾಣವೆಂದು ।
ತಱಸಂದು ಪಾರಿವದ ಕೊರಲ ರವವೆಂಬೊಸಗೆ
ವಱೆ ಬಾರಿಸಲ್ ಮುಂದೆ ಕೋಕಿಲೆಗಳುಲಿದು ಕುಕಿ
ಲಿಱವುತಿರೆ ಕೇತಕಿಯೆಸಳ ಶೂಲವನೇಱ ಮೆಱೆದುದಲರ್ಕ್ಕೆಯೊಂದು ॥ ೧೪ ॥

[1] ಳ್ದಚ್ಚಿ [2] ಫಲ

ಪುಂಡರೀಕದ ಕುಸಮದೆಸಳ ಹೊರೆಯೊಳ್ ಸಿಕ್ಕಿ
ಭಂಡಾಗಿ ಪುಷ್ಪಿತಲತಾರತಂಗೆಯಿದು ಕೈ
ಕೊಂಡು ಮಾತಂಗ ಜಾತಿಯೊಳು ದಾನವನು ವಂಶಾನೀಕಮಂ ಛಿದ್ರಿಸಿ ।
ಕೊಂಡು ಮಧುಪಾನಮಂ ತಲೆ ಬವಣಿ ಹಿಡಿದು ಮುಂ
ಕೊಂಡು ಹೊಲೆಯಂ ಸೊಕ್ಕಿ ಪೊನ್ನಶೂಲವನೇಱಿ
ಕೊಂಡನೋಯೆಂದೆನೆ ಮದಾಳಿ ಮಱೆದೊಱಗಿರ್ದುದೊಂದು ಸಂಪಗೆಯರಲೊಳು ॥ ೧೫ ॥

ವಸುಪುತ್ರ ಪಿತೃಬಂಧುಗಳೆ ವೈರವನು ಪು
ಟ್ಟಿಸಿದ ದೋಷವನಳಿಯಲೀಶ್ವರಾರ್ಪಣವಾಗೆ
ರಸೆಯಲ್ಲಿ ಮೃದುಪರಿಮಳಂದಳೆದು ಜನ್ಮಿಸಲನಾರ್ಪಿತಾಳಿಗಳೆಱಗಲು(?) ।
ಮಸಿವಣ್ಣವಪ್ಪವು ಪುಲಿತ್ತೊಡೆಯರಂದು ಪೂ
ಜಿಸಲೀಶನೊಲಿದನದಱಿಂದಾವು ಧನ್ಯರೆಂ
ದುಸುರುವಂದದೊಳಲ್ಲಿ ಮೆಱೆದವಾ ಪೂತಚಂಪಕವೃಕ್ಷ ದಿವ್ಯವೋಕ್ಷ ॥ ೧೬ ॥

ಉತ್ತಮದ ಮಿಸುಪಿಂದ್ರನೀಲದ ಹೊಳೆವ ಮಣಿಗೆ
ಕತ್ತುರಿಯುರುಳಿಗಳ್ಗೆ ಮುನ್ನಲೀ ಜಗಮುಮಂ
ಪೆತ್ತಜಂ ನಾಸಿಕಮನಾಱಡಿಯನೊಳ್ಗಱಿಗಳಿತ್ತನಲ್ಲದೊಡಿಂತಹ ।
ಚಿತ್ತರದ ಕಾಂತಿ ಪೊಸಕಂಪಿನೊಂದೇಳ್ಗೆಯಿಂ
ಮತ್ತವೇಂ ಪಡೆವವೇ ತಾವೆಂಬ ಮಾಳ್ಕೆಯಿಂ
ಪೊತ್ತು ಪರಿಮಳವನಾ ವನದೊಳಗೆ ಬಿಡದೆ ಸುಳಿವುತ್ತಿರ್ಪವರಸುದುಂಬಿ ॥ ೧೭ ॥

ಕಮ್ಮ ಕಮ್ಮನೆ ತೀಡುವಲರ ಸೌಸವದಿಂದೆ
ಘಮ್ಮನೆದ್ದಾಡುವಾಱಡಿಯ ಝೇಂಕಾರದಿಂ
ದಿಮ್ಮಡಿಸಿ ಮೋಹನಂ ಕೆಲೆವ ಪಾರಿವಗಳಿಂ ತರುಲತಾಗುಲ್ಮಂಗಳ ।
ಪೊಮ್ಮನಿಂ ಪೆಕ್ಕಣಂಗೆಯ್ವ ಸೋಗೆಗಳಿಂದೆ
ಯಮ್ಮಮ್ಮ ಮೂದೆಱದೆ ಸುಳಿವ ತಂಬೆಲರಿಂದೆ
ತಾಮ್ಮನೋಹರದ ವನಮಧ್ಯದೊಳ್ ಸರಸಿ ಮೆಱೆದುದು ಕೂಡೆ ಸೊಗಸುವೆರಸಿ ॥ ೧೮ ॥

ಮಾಮಾ ಕಬಂಧವೆಂದೆನಿಸಿರ್ದು ನೆಱೆ ಸರ್ವ
ತೋಮುಖಂ ತಾನಾಯ್ತು ವಿಷವೆನಿಸಿಕೊಂಡಮೃತ
ನಾಮವಾದತ್ತು ಜಡವೆನಿಸಿ ಸಂಜೀವನಂ ತಾನಾಗಿ ಸಂತೋಷಿಸಿ ।
ಭೂಮಿಪನ ಬರವನೇ ಬಯಸುತುಂತೊಪ್ಪುತಿ
ರ್ಪಾ ಮಹಾಸರಸಿಗೆಣೆವೆಣ್ಗಳೊಡಗೂಡಿ ಸು
ಪ್ರೇಮದಿಂ ಬಂದನಾ ಚೇರಮಮಹೀಪಾಲ ವಿಮಲಜಲಕೇಳಿಲೋಲ ॥ ೧೯ ॥

ಕೊಳರ್ವಕ್ಕಿಗಳ ಕೊರಲ್ಗಳುಲುಪೆ ಗಿಡಿಬಿಡಿಯಲ್ಲಿ
ತಳರ್ವ ಹಂಸೆಗಳ ಕ್ರೇಂಕಾರವೇ ಕಹಳೆಗ
ಳ್ಕುಳಿರ್ವ ನೀರೊಳ್ಪುಡುಮ್ಮಿಱುವ ಮೀನ್ಗಳ ರವಂ ತಂಬಟಂ ಮೇಲೆಯುಲರ್ದ ।
ಬೆಳರ್ವಣ್ಣದೊಳ್ತಾವರೆಗಳೆ ಸತ್ತಿಗೆಯಾಗೆ
ತಳಿರ್ವಾಸನಿಟ್ಟು ವೈಭವದಿಂದ ಬರುತಿರ್ಪ
ಮಿಳಿರ್ವ ಭೂಮೀಶ್ವರನನಿದಿರ್ಗೊಂಬ ಮಾಳ್ಕೆಯಿಂ ಸರಸಿ ರಾರಾಜಿಸಿದುದು || ೨೦ ||

ಪೊಸಸಪುರಮಂ ಹರುಷದಿಂ ತೆಗೆದು ಬಿಗಿದುಟ್ಟು
ಕುಸುಮಮಯ ಕಂಚುಕಂಗಳ ತೊಟ್ಟು ನಲ್ಮೆಯ್ಯೊ
ಳೊಸೆದು ಚಂದನವನಣ್ಪಿಟ್ಟು ಪೊನ್ನಂಡೆ ಜೀರ್ಕೊಳವಿ ಕೊಂಬುಗಳ ಪಿಡಿದ ।
ಬಿಸಜಾಕ್ಷಿಯರು ಕೂಡಿ ಚಿನ್ನಬೊಂಬುಳಿವಾದ್ಯ
ವಿಸರದಾಘೋಷದೊಳು ಖೋಯೆಂಬ ರಭಸದಿಂ
ದೆಸೆವ ಕೊಳನಂ ಪೊಕ್ಕನಾಹ ಚೇರಮಮಹೀನಾಥ ಘನಪುಣ್ಯಯೂಥ || ೨೧ ||

ನಡೆದುತ್ತರಕ್ಕೆ ಗೆಲವೆಂದೊರ್ವ ಕನ್ನೆ ಮೂ
ಱಡಿಯಿಟ್ಟು ಹಸ್ತದೊಳ್ಪಿಡಿದು ಜೀರ್ಕೊಳವಿಯಂ
ಬಿಡದೆ ಚಿತ್ತದೊಳರ್ಧನಾರೀಶನಂಘ್ರಿಯುಗಮಂ ನೆನೆದು ಜಾಣ್ಮೆಯಿಂದೆ ।
ಅಡಸಿಡಲು ತನಗೆಯಿದಱಿಂ ಮುಂದೆ ಶಾಂತಿ ಬಂ
ದೆಡೆಗೊಳಲುಬೇಕೆನುತಾತ್ತ ರಾಜಪುತ್ರನಾ
ಮಡದಿಗಿದಿರ್ವಂದುರವಣಿಸುತಂದು ನಿಂದು ಬಿಡದಾಡಿದಂ ಜಲಕೇಳಿಯ || ೨೨ ||

ಕೊಳನೆ ಕೇಳೆಮ್ಮ ದೇಹದ ಕಾಂತಿಗೆಣೆಯೆಂಬು
ದಳತೆಯಹ ನುಡಿಯಲ್ತೆನುತ್ತಲೊಳಪೊಗುತಲು
ಜ್ವಳದ ಕಂಜದ ಕೊರಲ ಮುಱದೆತ್ತಿ ಜೀರ್ಕೊಳವಿಯಿಂ ಜೀವನಂಗೊಳುತ್ತೆ ।
ಕೆಳಗಳಕಬಂಧಮಂ ತುಳಿದು ಕುಂಕುಮವೆರೆದ
ಮಳಯಜಂ ರಕ್ತದಂತಿರೆ ಖೋಯೆನುತ್ತ ಸ
ದ್ವಿಳಸದಿಂ ಕೋಮಲಾಂಗಿಯರೊಲವಿನಿಂದಾಡುತಿರ್ದರಾ ಜಲಕೇಳಿಯಂ || ೨೩ ||

ಚೇರಮಂ ಮುಗ್ಧಾಂಗನೆಯ ಜಲಕ್ರೀಡೆಗಂ
ಬಾರೆಂದು ಕರೆಯೆ ಲಜ್ಜೆಯೊಳೆ ಬಾರದೆ ನಿಲ್ಲೆ
ನಾರಿಯಿಟ್ಟಿರ್ದ ಪೆಂಡೆಯದ ಮಾಣಿಕಗೆಂಪು ಮೇಲೆ ಪರ್ವಿರೆ ನೋಡುತೆ ।
ಓರಂತೆಯುರಿಪತ್ತಿ ನೀನುಟ್ಟ ಸಪುರವಹ
ಸೀರೆ ಬೇವುತ್ತಲದೆಯೆನೆ ತವಿಪೆನೆಂದವಳು
ನೀರಜಾಕರದೊಳಂ ಪೊಗಲು ಸುಪ್ರೌಢೆಯರು ಕೈವೊಯ್ದು ನಗುತಿರ್ದರು || ೨೪ ||

ಮಲ್ಲಿಗೆಯ ಪೂ ಮಾಂದಳಿರ್ ನೆಯ್ದಿಲೆಸೆವ ಕಂ
ಕೆಲ್ಲಿ ತಾವರೆಯುರಲ್ದೀವಿದುದಕವನಿಳಾ
ವಲ್ಲಭಂ ಪೊನ್ನಂಡೆಯೊಳ್ಮೊಗೆದು ವನಿತೆಯರ ಮೇಲೆ ಚೆಲ್ಲಿದನೆಂತೆನೆ।
ಬಿಲ್ಲ ಹಿಡಿಯದೆ ಬತ್ತಳಿಕೆಯೊಳಲರಂಬುಗಳ
ನೆಲ್ಲವನೊಡರ್ಚಿಬಿಟ್ಟಾ ದಿಟ್ಟೆಯರ ಗೆಲ್ವ
ಫುಲ್ಲಶರನೆಂಬಂತೆ ಮೆಱೆದನಾ ಕೇರಳಾಧೀಶನಧಿಕಪ್ರಕಾಶ ॥ ೨೫ ॥

ತರುಣಿಯರೊಳಿಂತು ಜಲಕೇಳಿಯಂ ನಟಿಸಿ ಭೂ
ವರನಲ್ಲಿಯುರಸುಗಳಿಗಾಱುಬಾಯೆಂದೆಂಬ
ಪರಿಯಲ್ಲದೀಶ್ವರನ ವೀರ್ಯವೆ ಸರವಣದೊಳೆಸೆವ ಷಣ್ಮುಖನಾಗುತ।
ಇರದೆ ಪೊಱಮಡುವಂತೆ ಕೊಳದಿಂ ಹೊಱಂಟುವು
ರ್ವರೆಯಾಣ್ಮನುತ್ತಮ ಷಡಕ್ಷರಿಯ ಮಂತ್ರಮಂ
ಸ್ಮರಿಸುತ್ತ ದಿವ್ಯಾಂಬರಂಗಳಂ ಸತಿಯರ್ಗೆ ಕೊಟ್ಟುಟ್ಟು ಭಸಿತವಿಟ್ಟು ॥ ೨೬ ॥

ಬಂದು ಮಾಂದಳಿರ ಮಂಟಪದಲ್ಲಿ ಕುಳಿತು ನಲ
ವಿಂದೆ ಸಿತಭಸಿತರುದ್ರಾಕ್ಷೆಯಂ ಶಿವಮಂತ್ರ
ದಿಂದೆ ತಳೆದಾ ಕಾಂತೆಯರನಬ್ಜನೇತ್ರೆಯರ ಮಿಗೆಕುಸುಮಗಂಧಿನಿಯರ।
ಇಂದುಧರನರ್ಚನೆಗೆ ನಿರ್ಮಳೋದಕಪುಷ್ಪ
ವೃಂದಮಂ ತಹುದೆಂದು ಕಳುಪಿ ತರಿಸುತ್ತಂತ
ವಂದಿರೊಡರಿಚಿದ ಸೇವೆಯ ಕೈಕೊಳ್ಳುತ್ತಲೀಶ್ವರಪೂಜೆಗೆಯ್ದನರಸಂ ॥ ೨೭ ॥

ಸಚ್ಚಿದಾನಂದ ಜಲವನುಭವಂ ಗಂಧಮುರೆ
ನುಚ್ಚುನೂಱಾಗದಿಹ ನೋಟವಕ್ಷತೆ ಹೃದಯ
ದಚ್ಚದಾವರೆಯುರಲು ನಱುಸುಯಿಲ್ಧೂಪವಾ ಸುಜ್ಞಾನವೆಸೆವ ದೀಪ।
ವೆಚ್ಚಿಸಿದ ಹರಣಮುಪಹಾರವನುರಾಗವೇ
ನಿಶ್ಚಯದ ತಾಂಬೂಲವಾದಷ್ಟವಿಧಪೂಜೆ
ಯುಚ್ಚರಿಯೆನಲ್ಕೆ ಬಹಿರಂತರರ್ಚನೆಗಳಂ ಮಾಡಿದಂ ಚೇರಮಾಂಕಂ ॥ ೨೮ ॥

ಈ ಪರಿಯ ಜಲಕೇಳಿಯಂ ಸೌಂದರಾಂಗಿಸಹ
ಭೂಪನೊಡರಿಚಿ ಶಿವನ ಸೇವೆಯಂ ನೆಱೆರಚಿಸು
ತೋಪಭಕ್ತರ್ಗೆ ಸರ್ವೋಪದೇಶವನೆಸಗಿಯುಂದಳಂಗಳ ತೆರಳಿಸಿ।
ಆ ಪಟ್ಟಣಂಬೊಕ್ಕು ರಾಜಧಾನಿಯೊಳೆಸೆವ
ಸೈಪುವಡೆದಿರ್ದ ಸಿಂಹಾಸನಮನಡರಿ ನಿ
ರ್ವಾಪಾರ ವಿಭವದಿಂದಿರಲೊರ್ಮ್ಮೆಯಸ್ತಾದ್ರಿಗಿಳಿದನಿನನೆಂತೆಂದೊಡೆ ॥ ೨೯ ॥

ನಡುವಗಲ್ ಪದ್ಮಿನಿಯೊಳೊಡಗೂಡಿ ಭಂಡಾಗಿ
ಯೊಡನೆ ತೆಂಕಲ್ಪಡುವಲೊತ್ತಿಯತ್ಯಾಸೆಯಿಂ
ಬಿಡದೆ ತಲೆಕೆಳಗಾಗಿ ನಡೆಯಲಾ ದೋಷದಿಂ ತುಡುಕಿತ್ತು ರಾಹುತೇಜ |
ಉಡುಗತೊಡಗಿದುದಕ್ಷಿಯಡಸಿತ್ತು ಕುಷ್ಟ ಮೇ
ಣುಡಿದುವುರನನವೆಂದು(?) ನಾಣ್ಚಿ ಬಿದ್ದಂತೆ ರವಿ
ಕಡಲೊಳಿಳಿದಂ ತಾನೆನಲ್ಕೆ ಪಾತಕರಿಗೆಡರಡಸುವುದದೇಂ ಚೋದ್ಯಮೆ || ೩೦ ||

ಒಡಹುಟ್ಟಿದವನಾದೊಡೇನು ದೋಷಾಗಮನಿ
ಕಡುಸಿತಗನತಿಗುರುದ್ರೋಹಿಯೆನಿಪಾ ಚಂದ್ರ
ನೊಡಲ ನೆಳಲಿನಿತು ಸೋಂಕಿದೊಡೆನ್ನ ಪತಿ ಮುನಿವನೆಂದು ಸಿರಿ ತನ್ನ ಮನೆಯ |
ಕಡೆಯಲಡಿಯಿಟ್ಟಪನೆನುತ್ತಳ್ಕಿ ಮೇಣೆಸಳ
ಹಡಿಗೆತ್ತುಕೊಂಡಳೆಂಬಂತಲರ್ದ ತಾವರೆಗ
ಳುಡುಪನುದಯಕ್ಕೆ ಮುನ್ನವೆ ಮುಗಿದವಾಗ ಕತ್ತಲೆ ಕೂಡೆ ತಲೆದೋಱತು || ೩೧ ||

ಪಾತಾಳವೊಲೆ ಶೇಷನಡುಗಬ್ಬು ತಲೆ ರನ್ನ
ವೇ ತುದಿಯ ಕೆಂಡವವನಿಯೆ ಮಡಕೆ ಮುಚ್ಚುಳಂ
ತಾ ತೆಱಪಿನಾಗಸವಜಂ ಸಿದ್ಧನುರು ಸಂಜೆಗೆಂಪಿಂಗಲೀಕವಟ್ಟ |
ಪೂತರಸ ಕಜ್ಜಲಂ ಕವಿದ ಕತ್ತಲೆ ನೆಗೆದ
ಸೂತಕಣದಂತಂಬರದೊಳಿಡಿದ ನಕ್ಷತ್ರ
ಜಾತದಿಂ ಕಣ್ಗೊಳಿಸುವಾ ರಾತ್ರೆ ಜಾರಜಾರೆಯರೆಸೆದರೆಂತೆಂದೊಡೆ || ೩೨ ||

ಇಂದು ಬಾರಂ ಮನೆಯ ಗಂಡನೂರಿಗೆ ಹೋದ
ಬಂದ ಬಿದ್ದಿನನಾವತಾಣಕೆಯ್ದಿದನೊ ಜಗ
ವಂಧಕಾರಮದಾದುದಿರುಳಿಗೊರ್ವಳೆಯಕಟ ಹರಳಿಗಂ ರಪಣವಿಲ್ಲ |
ಎಂದಿರಲ್ ಬರ್ಪುದೇ ಸ್ನೇಹವೇ ಬೇಕಲಾ
ತಂದೆ ವಿಧಿಯೇ ಇಂತು ಮಾಡಿದ್ಯೆ ನೀನೆನು
ತ್ತಂದು ಬೇಸಱ ನುಡಿವ ಹದಿರಿಂದ ಜಾರೆ ಸೂಚಿಸಿದಳಾ ಪಾದರಿಗಗೆ || ೩೩ ||

ಇಡಿದ ಕತ್ತಲೆಯೆ ಮಗಿಲಾ ಹಾಳುಗುಡಿಯೆ ರತಿ
ಗೊಡರಿಚಿದ ಮಣಿಸೆಜ್ಜೆವನೆ ಹಡಿಕೆ [ಕ]ಸದಿಪ್ಪೆ
ಯಡಿಕಿಲ್ಗಳಾದಂಚೆಗಳ ತೂಳತಳ್ಪವಾ [1]ಸದೆಸೊಪ್ಪೆ[1] ಕೇಳಿಗವಳ |
ಒಡಗೂಡಿತೇ ಕಾಲವೆಂತಂತು ನೆರೆದುದೇ
ಬಿಡೆ ಕಾಮತಂತ್ರವಾಗಲು ಕೇರಿಕೇರಿಯೊಳು
ಬೆಡಗಿಂದೆ ಕೂಡಿ ಪಾಣ್ಬರು ತಮಂ ಹರೆಯಲದ್ಗನೋಡಿ ಮನೆಯೊಕ್ಕರೋಡಿ || ೩೪ ||

[1] ಬರುಬಾಟ (ಳ)

ಅಸುವನೊಯ್ಯಲ್ ಗೌತಮಂ ಸುರಪನುಂ ಕೂಡೆ
ಬಿಸುಗದಿರನಂದು ಪರಕಾಯಪ್ರವೇಶದಿಂ
ದೊಸೆದು ಮುಯಿಗೂಟದಿಂ ಕೂಡಿದರಹಲ್ಯೆಯುಂ ಜಮದಗ್ನಿ ಸುಡೆ ಬೂದಿಗೆ ।
ಅಸಮ ಜಲಮಂ ತಳಿವುತೇಳಿಸುತ್ತಿರೆ ನುಂಗೆ
ಬಸುಱನೊಳಪೊಗೆ ಪಾಣ್ಬನಂತಲ್ಲಿ ತಾ ಪಾದ
ರಿಸಿದ ರೇಣುಕೆಗೆ ಸರಿಯಪ್ಪ ಪಾಣ್ಬೆಯರು ಕತ್ತಲೆ ಹರೆಯೆ ಹರಿದರಲ್ಲಿ ॥ ೩೫ ॥

ಬಿಡದೆ ಹಾವಿನ ಬುತ್ತಿಯುಂ ಹೇಱುವೆಳೆಯೋರಿ
ಗೊಡರಿಚಿದ ಮನೆಯೊ ಸುರರೆಂಬ ಶಿಶುಗಳ್ಗಜಂ
ಕಡೆದಿಟ್ಟ ಬಾಯ್ವೆಣ್ಣೆಯುರುಳಿಯೋ ಮಿಗೆ ಜೊನ್ನವಕ್ಕಿಯೊಡಲುರಿವಿಸಿಲನು ।
ತಡೆಯಲಾಗಸವಟ್ಟಿಯೊಳಗೆ ನಲವಿಂದಿತ್ತ
ಬೆಡಗಿನಾಲದ ಸಸಿಯೊ ಪೇಳೆಂಬ ಮಾಳ್ಕೆಯಿಂ
ದೊಡನೊಗೆದುದಾ ಬಿರಹಿಯೆಂಬಿನೆರ್ದೆಯೆಡೆಗೆ ಮಾರಂ ಬಪ್ಪ ಚಂದ್ರಬಿಂಬ ॥ ೩೬ ॥

ಸುರರುಣಿಸಿಗಜನೆಂಬ ಪಾಮರಂ ಬೆಳಸಿದುರು
ತರದ ರಾಜಾನ್ನರಾಶಿಯಲಚ್ಚಣೆಯೊ ಬಳಿ
ಕ್ಕಿರುಳೆಂಬ ಬೇಡರಟ್ಟುತ್ತ ಹುತ್ತಡವಿಯೊಳು ಹೊಗಿಸಿ ಹೊಱಡದ ಮಾಳ್ಕೆಯಿಂ ।
ಎರಲೆ ಮೊಲಗಳ್ಗೆ ಬಳಸಿಟ್ಟ ಬೆಳ್ವಾರವೋ
ತರುಣಸಸಿಯಾಲಕೊಡರಿಚಿದಾಲವಾಲವೋ
ಪರಿಕಿಸುವನಾರೆನಲು ಮೆಱೆದುದಾ ಪರಿವೇಷವಮೃತದೊಬ್ಬುಳಿಯ ಕೋಶ ॥ ೩೭ ॥

ಪೊಂಗಿ ಬಳೆದೊಂದೆರಳ್ಮೂಱುನಾಲ್ಕೈದು ದಿವ
ಸಂಗಳೊಳಗೆಳೆವೆಱೆಯದೇವೇಳ್ವಿನಮಮ ನೆಱೆ
ದಿಂಗಳಂತಿರೆ ಕಂಡು ಪಾಲ್ಗಡಲ್ ಮೆಯ್ವೆರ್ಚೆ ತತ್ಸುತಂಗಿಳೆಯ ಜನರ ।
ಕಂಗಳೇಱಕ್ಕೆಂದು ತೂಪಿಱಿದು ಪಣೆಯೊಳತಿ
ಸಾಂಗಮಾಗಿಟ್ಟ ಕಜ್ಜಳದ ಬೊಟ್ಟೆನೆ ಕಡುಬೆ
ಡಂಗಾಗಿ ಮೆಱೆದುದಾ ಜೊನ್ನದಿಂ ತಾರೆಯಿಂ ಚಿಹ್ನದಿಂಧಮರರನ್ನ ॥ ೩೮ ॥

ಸಗ್ಗದೊಱೆ ಜಡೆಯಿಡುಂಕುಱೊಳು ಮೆಱವುತ್ತಿರ
ಲಗ್ಗಿಗಣ್ ಚೆಲ್ವನೊಸಲೊಳಗೆ ಥಳಥಳಿಸುತಿರೆ
ದುಗ್ಗಿಗರೆಮೆಯ್ಯನೊಲವಿಂ ನಲಿವುತಿತ್ತನೀ ನೆಲಕೆ ಬಿಸಮಯವೆಂಬಿನಂ ।
ಸುಗ್ಗಿಗೆಳೆಯನ ಸುಟ್ಟ ಬೂದಿಯಂಗದೊಳೆಸೆಯೆ
ಬಗ್ಗದೊವಲುಡೆಯೊಳುಳ್ಳುಡೆ ವಿರಾಜಿಸುತಿರಲ್
ಬಗ್ಗುವೆಣ್ಣಿನಿಯನಚ್ಚಿಯ ಚೆಲ್ವಗಾಲ ಸಲಹೆಗ್ಗಳದ ಭೋಗಮಲ್ಲ ॥ ೩೯ ॥*

---

* ‘ಗ’ ಪ್ರತಿಯಲ್ಲಿ ಈ ಪದ್ಯ ೯ನೆಯ ಸಂಧಿ ಸೂಚನೆಯಾದಮೇಲೆ ಬಂದಿದೆ

ಇದು ಸಕಲ ಭಕ್ತಪದಪದ್ಮ ಮಧುಕರಪುಣ್ಯ
ಸದನ ಗುಬ್ಬಿಯ ಮಲ್ಲಣಾರ್ಯರ ಕೃಪಾಪಾತ್ರ
ಮುದಿತ ನವರಸ ಭಾವ ಲಕ್ಷಣಾಲಂಕಾರ ನಿಪುಣನೆಂದೆನಿಸಿ ಮೆಱೆವ ।
ಚದುರಚೇರಮನೊರೆದ ಚೇರಮಚರಿತ್ರಮಂ
ಪದಪಿಂದ ಬರೆದೋದಿ ಕೇಳಿ ವಿಸ್ತರಿಸುವ
ರ್ಗೊದಗಿರ್ಪುದಾಯುರಾರೋಗ್ಯ ಸಂಪದಸರ್ವಸಿದ್ಧಿ ಸತ್ಯಂ ತಥ್ಯವು ॥ ೪೦ ॥



# ಎಂಟನೆಯ ಸಂಧಿ



**ಸೂಚನೆ .**

ಧಾತ್ರಿಯಧಿಪತಿ ಚೇರಮಂ ಸಖರೊಳೊಡಗೂಡಿ
ರಾತ್ರೀವಿಹಾರಮಂ ಮಾಡಿ ಬಂದರಮನೆಗೆ
ಮಿತ್ರನುದಯದ ಕಾಲದಲ್ಲಿ ಶಿವಪೂಜೆಯಂ ವಿರಚಿಸಿದನೇಳ್ಗೆಯಿಂದೆ ||

ಜಲಕಾಂತೆಯೊಳ್ ನೆರೆದೆಯಾ ಇಲ್ಲ ನಂಬೆ ನಾಂ
ಬಲಗಯ್ಯ ಕೊಡು ಸೂಳೆಗಾಱಗೆತ್ತಣ ಸತ್ಯ
ಎಲರುಣಿಯವಿಡಿವೆನಹೊ ಹಾವಡಿಗನಾಳ್ಕೆನಗೆ ತುಡುಕುವೆಂ ಕಿಚ್ಚನೆನಲು |
ಅಳಿಕದಗ್ನಿಸ್ತಂಭ ತಿಲಕವದೆಯೆನೆ ಶಿವೆಯ
ಮೊಲೆಯೆಂಬ ಲಿಂಗಮಂ ಮುಟ್ಟಿಯಧರಾಮೃತವ
ನೊಲಿದು ಬಳಿನೀರ್ಗೊಂಡ ತಪ್ಪಿಂದಲರೆಮೆಯ್ಯನಾದೆಯ್ಯೆ ಭೋಗಮಲ್ಲ || ೧ ||*

ಇಂತಪ್ಪ ಚಂದ್ರೋದಯದ ಕಾಲದಲ್ಲಿ ಭೂ
ಕಾಂತ ಚೇರಮರಾಯನೊಡನೆ ಕೈಮುಗಿದು ಗುಣ
ವಂತನೆನಿಸುವ ನಾಗರೀಕನೆಂದಂ ಜೀಯ ರಾತ್ರೀವಿಹಾರಕೀಗ |
ಸಂತಸದಿ ಚಿತ್ತೈಸಬೇಹುದೆಂದೆನಲಾಗಿ
ಯಂತದಂ ಕೈಕೊಂಡು ಸಿಂಗರಿಸಿ ನೃಪತಿಯ
ತ್ಯಂತ ವಿಭವದೊಳು ಹತ್ತೈದು ಮಂತ್ರಿಗಳೊಡನೆ ಹೊಱವಂಟನರಮನೆಯನು || ೨ ||

ಶಿವಿಯ ಮೃಗಮದಕೆಱಗುವಳಿಯ ಮಂಜುಳರಾ
ವವುರುಕಂಬಳಾಶ್ವತರ ಗಾನವಾಗುತ್ತಿರಲ್
ತವೆ ಕೊರಲ ಕತ್ತುರಿಯ ಲೇಪವೇ ಬಿಸವಾಗೆ ವಣೆಯ ಕುಂಕುಮದ ಬೊಟ್ಟೆ |
ಎವೆಯಿಕ್ಕದಗ್ಗಿಗಣ್ಣಾಗಲಂತಾ ಬಗ್ಗ
ದೊವಲುಟ್ಟ ಪುಲ್ಲಿಪಟ್ಟೆಯದಾಗೆ ಸಾಕ್ಷಾತ
ಶಿವನ ಸಾಕಾರಮಂ ಸೌಖ್ಯರಸಪೂರಮಂ ತಳೆದು ನಡೆದಂ ಚೇರಮಂ || ೩ ||

ವೈರಿನೃಪಕುಮುದಮಾರ್ತಾಂಡ ಯಾಚಕಜನಚ
ಕೋರ ಹಿಮಕರಪಿಂಡ ವಂದಿಸುರಕುಜವಿಬುಧ
ದಾರಿದ್ರ್ಯತತಿಖಂಡ ಮಜ್ಜೀವ ಸತ್ಕವಿಸ್ತುತಕೀರ್ತಿ ಕಮಲಜಾಂಡ |
ಸೂರ ಸಂಭವತೇಜ ವಿನುತ ಭೋಗಸಮಾಜ
ಸಾರ ನೂತನಕುಸುಮಕೇತು ಕರ ಸುರಭೂಜ
ಕೇರಳಾಧೀಶ ಎಂಬಾ ಪಾಠಕರ್ಗಿತ್ತನಾ ನವಗ್ರಹದ ಕಡುಕಂ || ೪ ||*

* 'ಗ' ಪ್ರತಿಯಲ್ಲಿ ಈ ಪದ್ಯ ೩ನೆಯ ಸಂಧಿ ಸೂಚನೆಯಾದಮೇಲೆ ಬಂದಿದೆ; ೪ನೆಯ ಪದ್ಯವಿಲ್ಲ.

ಸೂರಿಜನ ಚಿತ್ತ ಧಿಕ್ಕಾರಿ ಘನಮೋಹನಾ
ಕಾರಿ ವಿಟ ಯಾಚಕರ ಭೂರಿ ತಾಪಸ ನಿಕರ
ವೈರಿ ಕಾಮಾರ್ತರುಪಕಾರಿ ರತಿಕುಶಲ ವಿಸ್ತಾರಿಯುಲರ್ವಿಲ್ಲರಸನ ।
ಸೇರಿಯೋಲೈಸುತಿಹ ಕೂರಿಯಾಳ್ಗಳು ನಡೆವ
ದಾರಿ ಬಹುಹೃದಯ ಸಂಚಾರಿ ಕಂದರ್ಪನ ಕ
ಠಾರಿಯಂತಾ ಜನರ ಹಾರಿಕೊಂಡಿಹ ಸೂಳೆಗೇರಿಗೆಯ್ತಂದನರಸಂ ॥ ೫ ॥

ಬಲೆವಿಡಿದು ಧೀವರರು ತೋಹಸಿಕ್ಕಲ್ ಮೃಗಂ
ಬಲೆಯೊಳಗವಪ್ಪವಲ್ಲದೊಡೋಡುವವು ಕೂಡೆ
ಬಲೆವಿಡಿಯುದಬಲೆಯರು ತಮ್ಮ ನಯನಾಂಶುಜಾಲವ ಜಾಲದೊಳು ವಿಟಮೃಗ ।
ಸಲೆ ಕಾಲುಗೆಡಿಸಿ ಕೆಡಪುವ ವಾರನಾರಿಯರ
ಚೆಲುವ ವೀಧಿಯೊಳು ಪತ್ತೈದು ಸಖರುಗಳೊಡನೆ
ನೆಲದಾಣ್ಮನಮರನಾಥನ ಪುತ್ರ ಚೀರಮಂ ಬರುತಿರ್ದ ವೇಳೆಯಲ್ಲಿ ॥ ೬ ॥

ಅಲರ್ವಿಲ್ಲನೆಂಬ ಮಾಸಾಳು ಪಿಡಿದಿಹ ಬಾಳು
ಚೆಲುವ ಮಾರನ ಪಟ್ಟದಾನೆ ಮೋಹದ ಸೋನೆ
ಸಲೆ ಕಾವನೆಸೆವಗ್ಗಳದ ಬಗ್ಗು ಭಾವಜನ ಜೀವಮಾ ರತಿ ರಮಣನ ।
ಲಲಿತ ಕೀರ್ತಿಯ ಮೂರ್ತಿ ಮದನನುರ್ವಿನ ಗರ್ವ
ವೊಲವಂಗಜನ ಸಿಂಗರಂ ದರ್ಪಕನ ಕೂರ್ಪು
ನೆಲೆಯೆಂಬ ಮಾಳ್ಕೆಯಿಂ ಬೆಲೆವೆಣ್ಗಳಿರ್ದರಾ ನಿಲಯ ನಿಲಯದ ಮುಂಬಿಲಿ ॥ ೭ ॥

ಗಲ್ಲಮಂ ಮುದ್ದಿಸುವ ಮೊಲೆಗಳಾ ಮೃದುಪಾದ
ಪಲ್ಲವಕ್ಕೆಱಗುತಿಹ ನಿಡುಗೇಶದೊಪ್ಪಚ್ಚು
ಸೊಲ್ಲ ಕಿವಿಗುಸುರ್ವಂತುಟಿಸೆವ ನೀಳ್ದಸಳ್ಗಂಗಳುಱೆ ಪಿಡಿಯೆ ಕೈವಿಡಿತೆಯ ।
ಉಲ್ಲಂಘಿಸದ ಮಧ್ಯದಗ್ಗಳದ ಪೊಜವಾರ್ಗೆ
ತಲ್ಲಣಿಪ ತೊಡೆ ಬೆಡಂಗಮರ್ದ ನಡೆಯಿಂದಂಚೆ
ಪಲ್ಲಮುಱಿಗಳನೇಳಿಸುವ ಚೆಲ್ವಕಾಂತೆಯರ್ಗಳಲ್ಲಲ್ಲಿ ನಿಂದಿರ್ದರು ॥ ೮ ॥

ಬಾಲಕಿಯ ಮೆಲ್ಲೆರ್ದೆಯೆನಿಪ್ಪವನಿಯಲ್ಲಿ ಪೂ
ಗೋಲನಕ್ಕಱೆಯೊಳು ನಿಜಸಾಮರ್ಥ್ಯಬೀಜಮಂ
ಲೀಲೆಯಿಂ ಬಿತ್ತಿ ಕಾಂತಿಯ ರಸವನೆಱೆಯಲವಱರದಲ್ಲಿ ನಳನಳಿಸುತ ।
ಮೇಲೆ ಮೂಡಿರ್ದ ಮೋಹನದ ಮಾಳಿಯೆಂಬಂತೆ
ಯಾ ಲತಾಂಗಿಗೆ ವಿರಾಜಿಸಿದವು ಪರಳ್ಮೊಲೆ ವಿ
ಶಾಲಯೋಗಿಗಳ ಕೊಲೆ ಮೂಱುಲೋಕಕ್ಕೆ ಬೆಲೆ ಮದನಭೇರುಂಡನ ತಲೆ ॥ ೯ ॥

ಮೊಲೆಗಳಂಗನೆಯುರುರದಲ್ಲಿ ಬಿತ್ತಿದ ಪರ
ಳ್ಮೊಲೆ ಜವ್ವನಂ ಜಾಱದಂದದಿಂ ಬಲಿದ ಮೊಳೆ
ಮೊಲೆ ಮೋಹನದ ಬೆಳಸು ನಕನಳಿಸಿ ಬೆಳೆವ ನೆಲೆ ಮೊಲೆ ವಿರಹಿಗಳ ಬಲ್ಗೊಲೆ ।
ಮೊಲೆಗಳತ್ಯಧಿಕತರ ಸುಖಿಗಳಿಗೊಡಂಬಟ್ಟ
ಮೊಲೆಗಳತಿ ಸಾಹಸಿಗಳೆನಿಸುವರ ಗೆಲ್ದು ಬ
ಲ್ಮೊಲೆ ವಿಟಜನರ ತಲೆಯ ಬೆಲೆ ದಿಟ್ಟಗಾಲ ಸಂಕಲೆಯೆನಿಪರೆಸೆದಿರ್ದರು ॥ ೧೦ ॥

ತಂಡತಂಡದ ಕಾಮಿನಿಯರ ಕಡೆಗಣ್ಣೆಂಬ
ಹಿಂಡುಗುದುರೆಯ ಮೋಹನಂಗಳ್ಗೆ ಮೋಹನ ಕ
ರಂಡಮೆನಿಸುವ ಕುಂಭಕುಚಿಯರುರು ಜವ್ವನದ ಮದ ಸೊಕ್ಕಿದಾನೆಗಳ್ಗೆ ।
ಮಂಡೆಯ ತುಱುಂಬೆಂಬ ತಲೆವರಿಗೆಯಾಂತಿರ್ಪ
ಪುಂಡರೀಕಾನನೆಯರೆಂದೆಂಬ ಕಾಲಾಳ್ಗೆ
ಗಂಡನೆನಿಪೊರ್ವ ವಿಟನಶ್ವಪತಿ ಗಜಪತಿಯ ನರಪತಿಯ ಪೋಲ್ತಿರ್ದನು ॥ ೧೧ ॥

ಬಿಸರುಹಾಕ್ಷಿಯ ಕಾಯಕಾಂತಾರವೆಂದೆಂಬ
ಪೊಸಮಲೆಯ ನಡುಗಿಡುವನುಱೆ ಪೊಕ್ಕು ಪರಿದು ಕೈ
ವಸಮಾಡಿಕೊಂಡು ನೆರೆ ಕನಕಗಿರಿ ಹೇಮಶೈಲಂಗಳುಮನಧಟಿನಿಂದ ।
ಒಸೆದು ನವಯುವ್ವನೆಯ ಲಾವಣ್ಯವಾರಿಧಿಗ
ರಸನಾಗಿ ವನದುರ್ಗ ಗಿರಿದುರ್ಗ ಜಲದುರ್ಗ
ವಿಸರಮಂ ಪಾಲಿಸುತ ಕಾಮಚಕ್ರೇಶಂಬೊಲೆಸೆದಿರ್ದನೊರ್ವ ವಿಟನು ॥ ೧೨ ॥

ಎಸೆವ ಚೌಷಷ್ಟಿವಿದ್ಯಾನಗರಿಯಧಿಪನತಿ
ಕುಶಲನೆಂದೆನಿಸುವಾ ಪ್ರೌಢರಾಯಂ ಕಾಂತಿ
ಯಸಿಯ ನಡು ತೋರಮೊಲೆಯೆಂಬ ಸಿಂಹಾದ್ರಿಯೆಡೆಗೆಯ್ದಿ ಮಿಗೆ ಬಾಸೆಯೆಂಬ ।
ಮಿಸುಪಿಂದ್ರನೀಲದ ಜಯಸ್ತಂಭಮನ್ನಟ್ಟ
ರಸಿಕರ ಶಿರೋರುಮಣಿ ಕಟಕವಂ ತನ್ನ ಕೈ
ವಸಮಾಡಿಕೊಂಡು ಮೋಹದ ರಾಜ್ಯವಾಳುವಂತೊಪ್ಪಿದನದೊರ್ವ ವಿಟನು ॥ ೧೩ ॥

ಕಾಮಲಾಪುರದೂರ ಹಿಂದೆರಡು ವೃತ್ತಿಯುಂ
ಟಾ ಮೇಲೆ ಕಳಶಾಪುರದೊಳಗ್ರಹಾರಮೊಂ
ದೀ ಮಧ್ಯಧರೆ ಕೋಲುಕಾಱ ಮಾರುಗನಿಂದ ಹಾಳಾಯ್ತು ಮೇಲೆ ಮೇಲೆ ।
ಆ ಮಹಾದ್ವಿಜರ ಕಚ್ಚಾಟಮುಂಟೆಂದೊರ್ವ
ಭಾಮೆಯುಂ ಪೃಥುನಿತಂಬೆಯನುನ್ನತಸ್ತನೋ
ದ್ದಾಮೆಯುಂ ಶಿಥಿಲಮಧ್ಯಳನೆಯ್ದಿ ಹಾರುವರು ಹದಿರಿಂದೆ ನುಡಿದರಂದು ॥ ೧೪ ॥

ನಡೆಯ ಗಮಕದ ಗಾೞಿ ಬಿಡದಡಿಯನೋಲೈಸೆ
ನಡುವ ಸುತ್ತಿದ ಪಟ್ಟೆಯುಡೆ ಕಾಣ್ಬ ಮಾಳ್ಕೆಯಿಂ
ತೊಡರ್ದಾ ಸೆಱಂಗ ತನ್ನೆಡಗೈಗೆ ಸುತ್ತಿ ಕೊರಲೆಡೆಯ ಕೆಂಬಲ್ಗಱುಪಿರೆ ।
ನುಡಿಮುತ್ತು ತೀವಿದಿನಿಗಡಲನನುಕರಿಪ ಬಾಯ್
ಕುಡಿತೆಗಣ್ಗಳ ಕಾಂತಿ ಮಡದಿಯರ ಮೇಲೆ ತಾ
ನೊಡರಿಚಲ್ಮೆಱೆದರಾ ಪಡಪಿನ ವಿಟಾಳಿ ಸಂಗಡದ ಸಖರೊಂದುಗೂಡಿ ॥ ೧೫ ॥

ಸವಿನೋಟಗಂಡು ಮೆಲ್ಲನೆ ಸಾರ್ದು ನಸುನಗಲ್
ತವಕದಿಂ ನುಡಿಸಿ ನುಡಿಯೆಲ್ಲ ವಿನಯಮದಾಗೆ
ಜವದಿಂದಲೊತ್ತಿಯಿತ್ತೊಳಪೊಗಲ್ ಮೇಲಿಕ್ಕಿ ಸೋಂಕಿ ಸಲ್ಲಾಪದಿಂದೆ ।
ಕಿವಿಗಿಂಪುಗಱೆದು ತಕ್ಕೆಯ ಸೊಕ್ಕನಿಕ್ಕಿ ಮಿಗೆ
ನವಚುಂಬನಂದೋಱು ಕಾಮ ಕಡೆಗಾಬನ್ನ
ಯುವತಿಯರೊಳೊಡಗೂಡಿ ಮಚ್ಚಿಸುವ ಕೊನಬುಗಾಱರ ನೋಡುತರಸ ನಡೆದಂ ॥ ೧೬ ॥

ಪರ್ವಿ ಬೆಳೆದುರೆ ವಿರಾಜಿಪ ಕುಚಶ್ರೀ ಮಹಾ
ಪರ್ವತದ ಮುಂಬಿನೊಳು ನಡುನಾಭಿಗಮ್ಮರಿಯ
ನುರ್ವಿದೂರುದ್ವಯದ ಕದಳಿಗಳ ಪೊಕ್ಕು ತನುಮನಧನದ ಬಯಕೆಯುಳಿದು ।
ನಿರ್ವಾಣಪದವನೆಯ್ದದೆ ಬಱದೆ ಕಾಂತೆಯರ
ಕೊರ್ವಿದ ನಿತಂಬಾಗ್ರ ಮೋಹಿನೀಗಜವನತಿ
ಗರ್ವದಿಂದೇಱದೊಡೆಯೊದಱು ಕೆಡಪುವುದೆನಲು ಸತಿಯರುನ್ನತಿಯೆಂತುಟೊ ॥ ೧೭ ॥

ಮತ್ತಗಜಗಮನೆಯೊರ್ವಳು ಭದ್ರಶಾಲೆಯೊಳಿ
ರುತ್ತ ಮಣಿಗಣವನಂತಾಯ್ದಾಯ್ದುಕೊಂಡು ಸರ
[1]ನೆ[1]ತ್ತುತಿರೆ ವಿಟನೊ[2]ರ್ವ[2]ನೆಯ್ತಂದು ತನಗೊಂದು ಮುತ್ತ ಕೇಳ್ದಡೆ ನಗುತ್ತ ।
ಮತ್ತೆ ನೀಂ ನೋಡಿಕೊಳಬಲ್ಲಡಿದು ಕೇಳ್ ಮೇಲೆ
ಹತ್ತುಹಣ[3]ತೂಕದ್ವೈವತ್ತೇಳು[3] ಮಣಿಪುಂಜ
ವೃತ್ತಮಂ [4]ಬಿಂದುಗಳದೊಡೆ[4] ಸುಖವೆನುತ್ತ ನುಡಿದಳಾ ಹದಿರುಗೇಳ್ದನರಸಂ ॥ ೧೮ ॥

ಅತಿರೂಪವತಿಯೆನಿಪ ಸತಿಯನೊರ್ವಂ ಕಾಣು
ತತಿಕಾಂಕ್ಷೆಯಿಂದವಳ್ಗೊತ್ತಿಯೇನೆಂದು ತನ
ಗತಿಹಿತವನಂ ಕಳುಪಿ ಕೇಳಿಸಿದೊಡವಳವನ ಪೆಸರಾವುದೆನಲಾತನು ।
ನುತಿವೆತ್ತ ವಿಟಚಂದ್ರಮಂ ತಾನೆನಲ್ಕೆ ನಾಂ
ರತಿ ರಮೆಯೆನಗೆ ತನಗೆ ಮೊಱೆಯಲ್ಲವಾಗದೆಂ
ದತಿಚದುರೆಯೊರೆಯಲಂತದನು ಸಖನಿಂದಱದು ತೊಲಗಿದನದೇಂ ಚಿತ್ರಮೊ ॥ ೧೯ ॥

---

[1] ಗೆ (ಕ.) [2] ಬ್ಬ (ಗ) [3] ತೂಕವ್ವೆ ಬೆಲೆ ಒಂದು (ಗ) [4] ಬಂದಡೆ? (ಕ)

ಆ ಪದ್ಮಗಂಧಿ ಪೆತ್ತಿರ್ವರೊಡಹುಟ್ಟಿದರ್
ಪಾಪದಿಂ ದಂಪತಿಗಳಾಗಿ ಮುನ್ನಿನ ಕಥೆಯ
ತಾಪಸಂ ಪೇಳಿಯಾ ಮಣಿಲೇಖೆ ಸುತಮಾಲೆಯರಿಗೆ ಪುಟ್ಟಿದ ಕಂದನ |
ತೂಪಲ್ಲಿ ಧನವರ್ಧನಂ ತಾಯ್ಗಳಿವೆವೆನ
ಲಾ ಪೆಣ್ಣು ಬೇಡೆಂದು ದೋಷಮುಂ ಕಳಿದಳೀ
ಭೂಪ ಚೇರಮನ ಪುರನಾರಿಯರು ವಿಟಕುಲವಿಚಾರಿಯರು ಮೆಱೆದಿರ್ದರು || ೨೦ ||

ಕಳಿದಿಳಿದ ಮುಡಿ ಮಿಸುಪ ಕೊರಲುಲಿಪು ಕಣ್ಬೊಳಪ
ದಿಳಿಗೆ ಮುಸೆದೊಕ್ಕ ಮಣಿಹಾರಂಗಳಾನಂದ
ಜಳವೆಸೆವ ನಾಣೊಜ್ಜುರಂ ನೆಗೆವ ಪುಳಕಂಗಳಂಬುದಂ ಮೊರೆವ ಸಿಡಿಲು |
ಎಳಮಿಂಚು ವಾರಿವರಲಿಂದ್ರಗೋಪಂ ಸುರಿವ
ಮಳೆ ಹೊನಲ್ ಬೆಳೆಯಾಗೆ ಕಾರ್ಗಾಲದಂತೊರ್ವ
ನಳಿನಾಕ್ಷಿ ಪುಂಭಾವದಿಂ ತನ್ನ ವಲ್ಲಭನೊಳೊಡಗೂಡಿ ಸುಖಮಿರ್ದಳು || ೨೧ ||

ನಿನ್ನಧರಬಿಂಬಫಲಮುಂ ಬಳಲಿದಿನಿಯಗ
ತ್ಯುನ್ನತದೊಳೀವುತಂ ಕೇಳೆಲೆ ಮಗಳೆ ಹೊನ್ನ
ಗನ್ನೆಯರಸಂ ಧರಿಸುತಾ ಕ್ರಮವೃದ್ಧಿಯಿಂದಲನುದಿನವೀಂಟಲು |
ಚೆನ್ನಹುದು ಕಾಯಸಿದ್ಧಿಗಳಪವು ಮತಿಗಳು
ತ್ಪನ್ನತಿಕೆಯಹುದು ಪುಸಿಯಲ್ಲ ಮೂಲಿಕೆಯ
ನೆನ್ನಾಣೆ ಮಱೆಯದನಿಶಂ ಕೊಂಬುದೆಂದು ನಿಜವೃದ್ಧೆ ಬುದ್ಧಿಯ ವೇಳ್ದಳು || ೨೨ ||

ನೆಟ್ಟನಿವಳಂಗವೇ ಕಟ್ಟಾಣಿಮುತ್ತುಗಳು
ಹುಟ್ಟಿರ್ದ ತಾಮ್ರಪರ್ಣಿಯೊ ವಜ್ರಮಣಿಕುಲಂ
ಪುಟ್ಟಿರ್ದ ರೋಹಣಾದ್ರಿಯೊ ಶೈತ್ಯಸೌರಭ್ಯ ಮಾಂದವ್ಯವೆನಿಪ ವಾಯು |
ಹುಟ್ಟಿರ್ದ ಮಲಯಾಚಲವೊ ಸಿಂಹ ಮದಗಜಂ
ಹುಟ್ಟಿರ್ದರಣ್ಯಮೊ ತಾನೆನಲುವುಪಮೆಗಳ
ವಟ್ಟಿರ್ದಳುಪ್ಪರಿಗೆಯೊಳಗೆ ಭೂಮಿಪನವಳ ನಿಟ್ಟಿಸುತ ಬರುತಿರಲ್ಕೆ || ೨೩ ||

ಸತಿಗಲಂಕೃತಿಯನೊರೆವುತ್ತಿರ್ದನೊರ್ವನು
ನ್ನತ ಸರಸಶೃಂಗಾರ ಮುಖನವಕಧಿಕ ದೈವ
ತತಿ ವಾವೃತ್ತಿಮುಖ ಪಂಚರತ್ಯಾದಿ ಸುಸ್ಥಾಯಿಯಾ ಸ್ವೇದದ |
ತತಿ ಸಾತ್ವಿಕಾಷ್ಟಮತ್ಯಾದಿತ್ರಯಸ್ತ್ರಿಂಶ
ದತಿಶಯುದ ಸಂಚಾರಿವೊಟ್ಟಾಯಿತಾದಿ ದಶ
ವಿತರಾನುಕೂಲ ಚಾತುಷ್ಕ ಸ್ವಕೀಯೆ ಪರಕೀಯೆ ಪುಣ್ಯಿರೆ ಷೋಡಶಂ || ೨೪ ||

ತವೆಯಾ ಸ್ವಕೀಯೆಗಂ ಜೇಷ್ಠಾ ಕನಿಷ್ಠೆಯೆಂ
ದಿವರಿರ್ವರಿಗೆ ಮುಗ್ಧೆ ಮಧ್ಯೆ ಪ್ರಗಲ್ಭೆಯೆಂ
ಬಿವರಾಱುಂ ಕೂಡಿವೊಂಭತ್ತಱೊಳಗೈದುಳಿದು ಮಧ್ಯೆ ಪ್ರಗಲ್ಭೆ ನಾಲ್ಕು ।
ಇವರು ಧೈರ್ಯಾಧೈರ್ಯದಿಂ ಮಡಿಯೊಳೆಂಟಾಗ
ಲವರ್ಕೈವರೊಂದೆ ಹದಿಮೂಱು ಪರಕೀಯೆಯೆಂ
ಬವಳೊಷೆ ಕನ್ನೆಯೆಂದೆರಡು ಪಣ್ಯಳೆಯೊಂದು ಕೂಡಿ ಹದಿನಾಱಾದುದು ॥ ೨೫ ॥

ಇವಕೆಯಾ ಸ್ವಾಧೀನಪತಿ ಕಾದಿಯೆಂಟಱಿಂ
ದವೆ ಗುಣಿಸೆ ನೂಱಯಿಪ್ಪತ್ತೆಂಟು ವಚನ ಕೋ
ಪವು ತಪ್ರಮೋದವುಳ್ಳ ಬಲಾತ್ರಿಗುಣದೆ ಮುನ್ನೂಱಯೆಂಭತ್ತ ನಾಲ್ಕು (?) ।
ತವೆ ನಾಯಿಕಾ ಭೇದವಾಯ್ತು ನಾಗರಿಕಾದಿ
ಯವರು ನಾಲ್ವರುಂ ಸಖಿರು ಸಾರಿಕಾದಿಯ ನಾಲ್ಕು
ಯುವತಿಯರು ಸಂಭೋಗ ಮುಖ್ಯಂಗಳೀಕ್ಷಣ ದಶಾವಸ್ಥೆಗಳ ಪೇಳ್ದನು ॥ ೨೬ ॥

ಇಂತೊಪ್ಪವಡೆದಲಂಕಾರಶಾಸ್ತ್ರಮನಧಿಕ
ಸಂತೋಷದಿಂದೊರ್ವ ಸುಪ್ರೌಢನೊಲಿದು ನಿಜ
ಕಾಂತೆಗಿನಿತುಳಿಯದಂತುಸುರೆಯವಳಡಿಗಡಿಗೆ ಹೇಳಿ ಹರುಷಂಬಡುತಿರೆ ।
ಮುಂತೊಂದೆಡೆಯೊಳುಱುವ ಪಣ್ಯವೀಧಿಯೊಳು ಸೊಗ
ಸಂ ತಳೆದು ನೆಱೆ ಮುಗ್ಧೆ ಮಧ್ಯಮೆ ವಿದಗ್ಧೆಯರ
ನಂತವಾ ಮೋಹನವೆ ಮೂರ್ತಿಗೊಂಡಂತೆಸೆವುತಿರ್ದರದನೇವಣ್ಣಿಪೆಂ ॥ ೨೭ ॥

ತೊಳಪ ತಳಿರ್ಗಳ ಚೆಲ್ವನೊಳಕೊಂಬ ಪದತಳದ
ಬಳೆವ ಬಾಳೆಯ ನುಣ್ಪನಿದಿರ್ವಡೆವ ತೊಡೆಯೆಡೆಯ
ನಳನಳಿಪ ಬೇಟದಗೆಯೆಂಬೊಲು ತೆಱಂಬೊಳೆವ ನಸುಬಾಸೆ ಪೊಸತಾಗಿರೆ ।
ಎಳೆಯ ತಾವರೆಮೊಗ್ಗೆ ಮೊಲೆಯು ಹೊಗರ್ಗಳನುಗಿವ
ನಳಿತೋಳ ಮುದ್ದುನುಡಿವಡೆವ ಬಾಯ್‌ದೆಱೆಯ ಕ
ಣ್ಗಳ ಸವಿ ಕವಲ್ವಡಿದು ಕಾತರಿಸೆ ನಡೆನೋಡಲಱಿಯದಬಲೆಯರೆಸೆದರು ॥ ೨೮ ॥

ಎಳಮಿಂಡರಂ ಕಂಡು ಘಳಿಲನೆಯ್ತರುತಲಾ
ಕೆಳದಿಯರ ಮೇಲುದಂ ಕಳೆದು ಮಱೆಯಿಡುತ ಮೊಗ
ದೊಳಗೊಳಗೆ ನಸುನಗೆಯನೊಳಕೊಂಡು ನಾಣ್ಚುತಂ ಬಳೆಯಲಱಿಯದ ಬೇಟವಂ ।
ಸುಳಿಸುತಂ ನುಡಿಸಿದೊಡೆ ತಳಮಳಂಬೊಗುತಂ
ಕಳೆವಂತರಾ ಹದನ ತಿಳಿದು ಕರೆದೊಡೆ ಪೋಗ
ದಿಳೆಯೊಳಗೆ ಬೆಚ್ಚಂತೆ ಕಳೆಗೊಂಡ ಮುಗುದೆಯರ ಕಳೆಯ ಕಂಡಂ ರಾಜನು ॥ ೨೯ ॥

ಸವಿಯ ಪುತ್ತಳಿಯೊ ಮೋಹನ ಪುಂಜಮೋ ನೋಡೆ
ಕವಿವ ಕೊನಬುಗಳ ಕಣ್ಣಿಂಬೊಕ್ಕು ಬಿಡದಿರ್ಪ
ತವಕವೋ ಮೋಹರಾಜ್ಯಕೆ ಕಾವನೊಲಿದಿಟ್ಟ ಪಟ್ಟದಾನೆಯೊ ರಾಜಿಪ |
ನವರಸಂಬೊರೆದ ಸುರತದ ಸುಗ್ಗಿ ವೆಗ್ಗಳಿಸಿ
ತವೆ ತಾನೆ ಮೂಱುಲೋಕದ ಸೈಪಿನಿಂ ರೂಪ
ಜವದಿಂದಲಾಂತುದೋಯೆನೆ ತುಂಬಿ ತುಳ್ಕಿ ಸೊಕ್ಕುಂಜವ್ವನೆಯರೆಸೆದರು ॥ ೩೦ ॥

ಒಳಪೊಕ್ಕು ನೋಡಿ ಕರಗಿಸಿ ಸೊಕ್ಕುದಕ್ಕೆಯೊ
ಳ್ಪುಳಕವುಂ ಪೊತ್ತೆತ್ತಿ ಬಾಯ್ದೂಟದಱಿಕೆಯೊಳ್
ಕಳೆಗಳುಮನೆಚ್ಚಱಿಸಿವುಗುವುರ್ಗೆಯೊಳ್ಗಂ ರ್ಘೋಂಪಿಸುವ ಜುಮ್ಮುಗಳನೆಬ್ಬಿಸಿ |
ಮೊಳೆವ ಬೆಮರ್ವನಿಯ ಮಳೆಯೊಳಗೆ ನನೆಯಿಸಿ ಕೂಟ
ದೊಳಗೆಸೆವ ಸುಖಸರಧಿಯೊಳಗೆ ನಲ್ಲನನಿಂತು
ಮುಳುಗಿಸಿ ವಿರಾಜಿಸುವ ಜವ್ವನೆಯರಿರ್ದರಾ ಕಂಡರೆರ್ದೆ ಹವ್ವಳಿಸಲು ॥ ೩೧ ॥

ಪೊಸಬಾಗಿಲೊಳು ನಿಲಲು ರಸಿಕವಿಟಕೋಟಿಗಳು
ಪೊಸೆದು ಸುಳಿಯಲು ಹೆದಱಿದೆಸೆದು ಸಲೆ ಗಾಡಿ ಮಿಗೆ
ಸಸಿನೆ ನೋಡುತ ನೋಡೆ ನಸುನಗುವ ನಗೆ ತನ್ನ ದೆಸೆಗೆ ನಡೆತರಿಸಲವರ್ಗೆ |
ಪಸರಿಸಿ ಮಹಾವಿನಯದೆಸಕವುಂ ಸಮರಸವ
ನೆಸಗಿ ಮನದಂತಾಗಿ ಸುಸಿಲ ಜಾಣ್ಮೆಯೊಳೆಲ್ಲ
ರಸುವನೊತ್ತೆಯ ಕೊಂಬ ಕುಶಲದ ಮಹಾಪ್ರೌಢ ಶಶಿಮುಖಿಯರೆಸೆದಿರ್ದರು ॥ ೩೨ ॥

ಸವಿಮಾತನಾಡೆ ಮೇಲಿಕ್ಕುವಾ ನಲ್ಲಂಗೆ
ತವಕಕೊಳಗಾಗಿ ತರಹರಿಸಿ ನೋಡುತಲೊಂದು
ನೆವದಿ ಕಲಹಂಗೊಂಡು ಹದನಱಿದು ತಿಳುಪಿ ಹಳಸುಸಿಲ ಬೆದಕುತೆ ಕಳೆಗಳ |
ಜವದಿಂದೆ ಮುಟ್ಟಿ ಜಾಣ್ನುಡಿಗಳಿಂ ಮುದ್ದಿಸುತೆ
ತವೆ ತನ್ನ ಬಗೆಯ ಕಣ್ದೆಱವಾಗಿ ತೋಱು ಮ
ತ್ತವನೊಳೆರವಳಿದು ಕೂಡುವ ನೀಱೆವೆಣ್ಗಳುವನೀಕ್ಷಿಸುತ್ತರಸ ನಡೆದಂ ॥ ೩೩ ॥

ನೆನೆದ ಕಲೆಗೊದಗಿ ನೇಹದ ಹದನನೆಸಗಿ ಹಣ
ದಿನಿಯೆನಿಪ ತಾಯ ಮಾತಂ ಮೀಱದವಳಂತೆ
ವಿನಯದಿಂದಿನಿಯನಂ ಕೆಲದಿನಂ ತೊಟ್ಟಾಡಿ ಹೆಚ್ಚುಗಾಱಿಕೆಯ ಬೆಳಿಸಿ |
ಮನೆಯ ವಸ್ತುವನಿತ್ತು ಮತ್ತವನ ವಿತ್ತದೊಳ
ಗಿನಿತುಳಿಯದಂತೆಲ್ಲವಂ ಕವರ್ದುಕೊಂಡು ಬಱಿ
ಗನ ಮಾಡಿ ಜಾಣ್ಮೆಯಿಂ ತೊಲಗಿಸುವ ಘಳಿಸೂಳೆವೆಣ್ಗಳೊಪ್ಪಿರ್ದರಲ್ಲಿ ॥ ೩೪ ॥

ಲಲನೆಯರ ನಿಡುಜಡೆಗೆ ಪಡಿಯೆನಿಸಿಕೊಂಡು ಭುಜ
ಬಲದಿಂದಲೆಯ್ತುಪ್ಪ ಫಣಿಗಳನವರ ಚರಣ
ಜಲರುಹವನುಱೆ ತಾಳ್ದು ಬಱದೆ ಪದ ನಾಲ್ಕು ತಮಗುಂಟೆಂಬ ಬಿಗುಪಿನಿಂದ |
ಅಲುಗದಿಹ ಕೀಲಣೆಯ ಪರಿಯಂಕದಗ್ರಮಂ
ಬಲುಪಿಂದೆ ಮೆಟ್ಟಿ ದಂಪತಿಗಳೊದವುತ್ತವರ
ತಲೆಕಾಲ ಕಟ್ಟಿ ತೂಗಿಸುವಂತೆ ಸರಪಣಿಯ ತೂಗುಮಂಚಂ ಮೆಱೆದವು || ೩೫ ||

ಮಿಗೆ ಪಜ್ಜಳಿಪ್ಪ ಗುಜ್ಜರಿಗಾಲ ಮಂಚದಿಂ
ಜಗಜಗಿಸುತೊಪ್ಪವೆತ್ತುಪ್ಪರಿಗೆ ಮಂಚದಿಂ
ಸೊಗಸುಗೂಟಕೆ ತಣಿವನೀವ ಮಣಿಮಂಚದಿಂ ಕಳಕಳಿಪ ಸೆಳೆಮಂಚದಿಂ |
ಮಿಗಿಲೊಪ್ಪುತಿರ್ಪ ಚಪ್ಪರ ಮಂಚದಿಂ ರತಿಗೆ
ನಗುತ ಕುಕಿಲಿಱುವ ಶಕುನಿಯ ಮಂಚದಿಂ ಮೇಲೆ
ಬಗೆಗೊಂಡು ನೀಱೆಯೊಳು ಸುಪಿಲನೆಸಗುವ ಜಾಣವಿಟನಲ್ಲಿ ಕಂಗೆಸೆದನು || ೩೬ ||

ಮೆಱೆವ ಸೆಜ್ಜಾಲಯದಿ ಸಱಿಮಿಂಡಿವೆರಸಿ ಮನ
ಕುಱುವ ಮಂಚದೊಳೊಲ್ಮೆಯೆಱೆಯನೊಪ್ಪುತ್ತಿರಲ್
ತಱಿಸಂದು ನಾಗರಿಕನುಱದೆ ರಸಿಕೋಕ್ತಿಗಳ ಕಱೆಯೆ ವಿಟನೋರೊರ್ವರ |
ಕುಱಿತು ಕೂರಿಸಲಲ್ಲಿ ನೆಱೆ ಪೀಠವರ್ಧನಂ
ಬೆಱಗಿನಿಚ್ಛೆಯನಾಡಲುಱೆ ವಿದೂಷಕನಕ್ಕ
ಱುಱಿಸೆ ಹಾಸ್ಯವನಾಡಲಱಿದು ಮದನೋದ್ರೇಕವೊಱೆವನಿತಱೊಳಗೆಲ್ಲರು || ೩೭ ||

ಇನಿಯನಿಂಗಿತವಱಿದು ತನತನಗೆ ನೆವವಿಟ್ಟು
ಮನೆಯ ಕೆಳದಿಯರ್ಗೂಡಿ ವಿನಯ ಮಿಗೆ ಕವಿಮುಖ್ಯ
ರನುವಱಿದು ತೊಲಗೆ ಮೆಲ್ಲನೆ ಲಜ್ಜೆ ಸರಿಯೆ ಕಾಮನ ಪಂಥ ಕೈಗಣ್ಮಲು |
ಸನುಮತದ ಬಳ್ಳಿಯಪ್ಪಿನ ಮೊಗವ ತೆಗೆಯದಿಹ
ಘನತರದ ಚುಂಬನದ ತನು ಸೊಕ್ಕುಗೆಯಿವುಗು
ಗೊರ್ನೆಯ ಝೊಂಪಿಪ ಝುಮ್ಮನನುಕರಿಪ ದಂತಹತಿ ಕೊನರುತಿರೆ ಕೂಡಿದ್ದರು || ೩೮ ||

ಕುಶಲಜಾತಿ ಪ್ರಕೃತಿ ಸತ್ವ ಸಪ್ತಾವಸ್ಥೆ
ರಸ ಮತಂ ವೇಗಕಾಲ ಪ್ರಮಾಣಂ ಕಲಾ
ಪ್ರಸರವಂತೀರಾಱುತೆಱದಪ್ಪ ಪನ್ನೆರಡು ಚುಂಬನಂಗಳ್ ನವನಖಂ |
ಮಿಸುಪೈದು ದಂತಹತಿಯುತ್ಥಾನ ತಿರಿಯಕ್ಕು
ಮೆಸೆವಾ ಸಿತಾನತಾಸ್ಥಿತಕೊಗೆವ ಚೌಸೀತಿ
ಪೊಸಬಂಧವೈದು ತಾಡನಗಳಾ ಮೋಕ್ಷೈದು ಬಗೆಯ ಸೀತ್ಕಾರವಱಿದು || ೩೯ ||

ಸವಿನೋಟವಾಲಿಂಗನಂ ಚುಂಬನಂಗಳಿಂ
ದವೆ ಮೂರ್ಛೆಯಂ ಮಾಡಿ ಗಿರಿಕರ್ಣಿಕೆಯ ಕುಸುಮ
ದವೊಲಿರ್ಪ ಸತಿಯ ನಾಣ್ಬುಡುಕಿ ಮದನಾಂದೋಳವಾ ಸ್ಮರಛತ್ರಮನೆಸೆವ |
ನವಪೂರ್ಣಚಂದ್ರಂಗಳಾ ನಾಡಿಯಂ ರಾಜಿ
ಸುವ ಕರಿಕರಂ ಮುಕುಳಮುದ್ರೆ ತರ್ಜನಿಗಳಿಂ
ದವೆಯಲುಗಿ ಪೊಸದೊಸೆದು ಮುಟ್ಟಿ ಮನಮುಳುಗಿ ಕೂಡಿದನೊರ್ವ ಜಾಣವಿಟನು ||೪೦||

ನುಣ್ಗಲ್ಲದೆಡೆಯಲ್ಲಿ ಮಕರಿಕಾಪತ್ರಮಂ
ಜಾಣ್ಗೂಡಿ ಒರಸಿಯೊಬ್ಬಣ್ಣಗಳ ಕೈಯಿಂದೆ
ಪೆಣ್ಗೆ ತನ್ನಯ ಮನವನಡಹಿರಿಸಿ ಪೋಷನ ಧನಂಗೊಂಡು ಸಾಕ್ಷಿಯಿಟ್ಟು |
ಕಣ್ಗಳಂ ಮೊಲೆಯೊಳ್ ಸ್ವಹಸ್ತಲಿಖಿತವನೊಂದ
ನಾಣ್ಗಂದದಿಕ್ಕಿ ಪಂಚಾರೂಢಿ ಕಲೆಗಳೊಳ್
ಪೂಣ್ಗೊಂದು ಬಣ್ಣಿಗಂ ನಿಚ್ಚನಿಚ್ಚಂಗೆಯ್ವ ವಿಟನಿರ್ದನೊಂದೆಡೆಯೊಳು ||೪೧||

ಮೃಗನೇತ್ರೆಗೇನುಮಂ ಕೊಡದೊರ್ವ ವಿಟನು ಸಟೆ
ನಗೆನುಡಿಯೊಳೊಡಗೂಡಿ ಕಾಲಮಂ ಕಳಿವುತಿಹ
ಬಗೆಯನಾ ಮುಗುದೆವೆಣ್ಬಾಯಱದು ತನಗಿಟ್ಟ ಹಾರವಾಲಿಂಗನದೊಳು |
ಮುಗುಳುರವನೊತ್ತಿದರೆ ಕೋಮಲಾಂಗಂ ನೊಂದು
ಪುಗುಳೇಳ್ವವೆಂದು ತಾಂ ತೆಗೆದೊಂದು ನೆವದಿ ಬಱು
ದಗಹಿಗೊತ್ತೆಯನಿಟ್ಟು ಚಾಳಿಸಿದಳವನನವಳಱತವನದೇವೇಳ್ವೆನು ||೪೨||

ಕನ್ನೆಗಿದಿರ್ವಂದೊರ್ವ ಸಖಿ ಮನೋಹರಮಪ್ಪ
ರನ್ನಗನ್ನಡಿವಿಡಿದು ನಿಂದಿರಲು ಪಿಂದೆನೆಯ
ಚೆನ್ನಿಗನ ನಿಜರೂಪು ಮಾರ್ಪೊಳೆಯೆ ಕಂಡು ಕೈಪಿಡಿಗೆ ಗವಸಣಿಗೆದೊಡಿಸಿ |
ತನ್ನ ಮಿಸುಪುಪ್ಪರಿಗೆಯಡರಿ ತೆಗೆದೀಕ್ಷಿಸಿ ಮ
ನನ್ನೊಂದು ಕಾಣದಳವಳಿದ ಮುಗ್ಧೆಯ ನೋಡು
ತನ್ನಗುವ ಸತಿಯರಂ ನಾಗರೀಕಂ ತೋಱೆ ಪರಿಕಿಸುತಲರಸು ನಡೆದಂ ||೪೩||

ಅಲರಂಬುಗೂಡಾದ ಸತಿಯನೊಲವಿಂ ಕಾಮ
ನಲರಂಬಿನೆಸೆವ ಬತ್ತಳಿಕೆಯಂತಿಹ ಬನ
ಕ್ಕಲರ್ಗಣ್ಣ ಸಖಿಯುರೋಯರದಿಂದೆ ಕೊಂಡು ಬಂದಲರ್ವಾಸಿನಲ್ಲಿ ಬೈತು |
ಅಲರಂಬುಮಂ ಚಿಮ್ಮಲಂತಹಿತರಿಂದೇಱು
ಗೆ ಲತಾಂಗಿ ಬಂದು ಬಳಿಕಂ ಪಗೆಯ ನಿಲಯಮಂ
ಸಲೆ ಪೊಕ್ಕ ಮಾಳ್ಕೆಯಿಂದಾ ಯುವತಿ ಬಿರಹದಿಂದಿರಲೊರ್ವ ಕೆಳದಿ ಕಂಡು ||೪೪||

ರೂಪುಗಾಣುತ್ತೆಣಿಕೆಗೊಳಗಾಗಿ ಸುಯ್ದು ಮಿಗೆ
ತಾಪಜ್ವರದಿ ನೊಂದು ತನುತನುವದಾಗಿಯುಶ
ನಾಪೇಕ್ಷೆಯಂ ತೊಱೆದು ಕಳವಳಿಸಿ ಮೌನಮೂರ್ಛೆಗೆ ಸಂದು ರಮಣ ನಿನ್ನ |
ಓಪಳಸುಗಳೆವುತ್ತಲವಳೆ ಕೇಳ್ ನವಪುಷ್ಪ
ಚಾಪಯಿನ್ನೊಂದುವಂ ಕಾಣಿಸದೆ ನೆರೆದುಳುಹು
ಕೋಪಮಂ ಬಿಟ್ಟು ನೀನೆಂಬ ಕಾಂತೆಯ ಚದುರ್ನುಡಿಗೇಳಿ ನೃಪತಿ ನಡೆದಂ || ೪೫ ||

ಹೆಚ್ಚಿರ್ದ ವಿರಹದಿಂ ರಮಣ ನಿನ್ನಿನಿಯಳ್ಗೆ
ಪಚ್ಚೆಗಪ್ಪುರದ ಪುಡಿ ಕಾಯ್ದು ಘಟ್ಟಿಗಳ ಕಿಡಿ
ಗಿಚ್ಚಲುಂ ಪಾಸುವಾ ಕುಸುಮವುನ್ನತ ವಿಸಮುವಾ ಗಂಧ ನಿರ್ಬಂಧವು |
ಇಚ್ಚೆವಡಿಸುವ ಹಲವು ವೀಣೆ ಸದಕುವ ಡಾಣೆ
ಹೊಚ್ಚಹೊಸಗಂಪು ಮನ್ಮಥನ ಫೌಜಿನ ಗುಂಪು
ನಿಚ್ಚಯವೆನಿಸಿ ತೋಱುತಿರ್ದಪವು ಬಂದುಳುಹೆನುತ್ತೊರ್ವ ಸಖಿ ನುಡಿದಳು || ೪೬ ||

ಎಂದಿಂತು ವಿರಹಿಣಿಯವಸ್ಥೆಯಂ ಕೇಳ್ದು ಗುಣ
ವೃಂದನವಳಿರ್ದೆಡೆಗೆ ಪೋಗೆ ಸಸಿಕಳೆಗಳಿದಿ
ರ್ವಂದಾ ಚಕೋರಿಯಂತತಿ ತುಷ್ಟಿಯಾಗಿ ತಡೆದಿರ್ದಧಿಕ ಕಾತರಗಳೆ |
ಮುಂದುವರಿದವೊಲು ಮೇಲ್ವಾಯ್ದಪ್ಪಿ ಸಮರತಿಯೊ
ಳೊಂದಿ ನಲ್ಲನೊಳಿಂತು ಸುಖದೊಳಿರೆ ಬೇಱೆ ಮ
ತ್ತೊಂದೆಡೆಯೊಳೊರ್ವ ಸತಿ ಸುತೆಗೆ ಬುದ್ಧಿಯನುಸುರುತಿರ್ದಳವಳೆಂತೆಂದೊಡೆ || ೪೭ ||

ಗನ್ನಗದಿಕಿಂದೊರ್ವ ವಿಟನೇನುವಂ ಕೊಡದೆ
ನನ್ನಿಯಿಂದೊಲಿದಂತೆ ಹೊಯಿಸೆಂಡನಾಡುತಿರೆ
ಮುನ್ನಲಱದವಳಬ್ಬೆ ಮಗಳಿಗುಸುರ್ದಳು ಹದಿರೊಳಾ ಕೊಲಗುವಾಯತವನು |
ಚೆನ್ನೆ ಕೇಳವನಿತ್ತ ಹಾರಂ ವಿಚಾರಿಸಲ್
ಹೊನ್ನ ಕೊಡನಂ ಪೋಲ್ವ ನಿಬಿಡಸ್ತನಂ ಸೋಂಕಿ
ಕನ್ನೆ ಮಣಿಯೊಕ್ಕಡಾವುದು ಸಾಹಸಂ ಮುಂದೆ ನೋಡಿಯಾಡೆನುತಿರ್ದಳು || ೪೮ ||

ಮರವುಱಯನಾ ಮಾರುತಂ ಗುರುದ್ರೋಹಿ ಚಂ
ದಿರನರಸುದುಂಬಿಗಳು ಪಿರಿದು ಮಧುಪಾನಿಗಳು
ವರಚೈತ್ರನುಱೆ ಕಾಡಬೇಡನಲರಂಬುಗಳು ಗುಣಧರ್ಮವಂ ಬಿಟ್ಟವು |
ಪುರುಳಿಗಳ ನುಡಿ ಚಹಡಿ ಕೋಗಿಲೆಗಳಿಪ್ಪಟ್ಟು
ವರೆಯುಲೇನಂಗಜಂ ವೈ ಕೆಟ್ಟವಂ ಮಗಳೆ
ಪುರುಷನನಗಲ್ದು ಕೆಡಬೇಡೆಂದು ತಾಯ್ ಪೇಳಲದನರಸು ಕೇಳ್ದು ನಡೆದಂ || ೪೯ ||

ಗೆಲವಿಂ ಭುಜಂಗಭೂಪಂ ಸಂವರಣೆಯುಳ್ಳ
ಮೊಲೆಯೆಂಬ ದುರ್ಗಮಂ ಕೈಸೂಱೆಗೊಂಡು ಶಶಿ
ಕಳೆಗಳಕ್ಕಡೆಯಲ್ಲಿ ದಂತಪಂತಿಗಳೆಂಬ ಪೌಜಿಟ್ಟುಕೊಂಡಿರ್ದೊಡೆ ।
ಬಲಿದಿರ್ದಧರ ಕೋಂಟೆಯಂ ಹಿಂಡಿ ಹಿಳಿವುತ್ತೆ
ಲಲಿತಾಂಗಿ ಬಾಲಕಿಯ ಮುಖರಾಜ್ಯವೊದವಿಸುತ
ಸುಲಭ ಲಜ್ಜಾರ್ಥಮಂ ದಳದುಳಂಗೊಂಡೊರ್ವ ವಿಟನಲ್ಲಿ ಕಣ್ಗೆಸೆದನು ॥ ೫೦ ॥

ನಿನ್ನ ಪಾವನ ಮೋಹನಂ ಲಸಜ್ಜೀವನಂ
ನಿನ್ನಪಾಂಗದ ಹೊಳಹು ಕುಸುಮಬಾಣದ ಸುಳುಹು
ನಿನ್ನುರೋಜದ ಗಾಡಿ ಕಾಮನೃಪತಿಗೆ ಜೋಡಿ ನಿನ್ನಧರವಧಿಕ ಮಧುರ ।
ನಿನ್ನ ನುಡಿಯಮರಲೋಕದ ಸುಧಾರಸಕೆ ಪಡಿ
ನಿನ್ನ ಸಡಿಲದ ತಕ್ಕೆ ಸಗ್ಗದ ಸುಖಕ್ಕೆಕ್ಕೆ
ಯೆನ್ನುತಂ ವಿಟನೊರ್ವನೆಸೆವ ರತಿಯೊಳ್ ಸತಿಯ ಬುಜ್ಜಯಿಸಿ ನೆರೆವುತಿರ್ದಂ ॥ ೫೧ ॥

ಮೇಲ್ವಾಯ್ದು ವಿಟನ ಕೇಶಾಗ್ರಮಂ ಪಿಡಿವುತಡಿ
ಕಿಲ್ವಾಸಿನೊಳ್ಕೆಡಂಪುತ್ತೆ ಕರ್ಪುರವುಡಿಯ
ಚೆಲ್ವಬಾಯೊಳ್ ಪೊಯ್ದು ತೋಳ್ ನೇಣೊಳೊಲಿದು ಬಿಗಿಬಿಗಿದು ಕಟ್ಟುತ್ತಲಾಗ ।
ಸಾಲ್ವುದೆಂಬಂತುರಸ್ತಾಡನಂ ಮಾಡುತ್ತ
ಬಲ್ವಿನ್ನಣದಗಳ ರವಂಗಳಿಂ ಝುಂಕಿಸುತ
ರಲ್ವ ಪೂಮಾಲೆಯಿಂ ಪೊಯ್ವುತ್ತಲೊರ್ವ ಱಟ್ಟಡಿಕಾರ್ತಿಯೆಸೆದಿರ್ದಳು ॥ ೫೨ ॥

ಱೂಢ್ಯೈಸಿದಜಸೃಷ್ಟಿಯುವರೊಳಧ್ಯಕ್ಷನ
ತ್ಯಾಡಂಬರದ ಪರ್ಣ ಪೂಗಪ್ರಿಯಂ ಹರುಷ
ಗೂಡಿ ನೆಗೆದಾ ರೋಮ ಕಂಚುಕಾಂಗಂ ಕ್ರೂರಯುದ್ಧವಱಿಯಿಡದ ಸುಗುಣಿ ।
ಆಡಲೇನವಿರತಂ ಕುಱುಹಿಂಗೆ ಬಂದವಂ
ಕೋಡಿವನ ತಲೆಯೊಳುದಿಸಿತ್ತಾಱ ಹೋತನೋ
ನೋಡು ಸಖಿಯೆಂದು ಸತಿ ಕಟಕಿಯಿಂ ವಿಟನ ಕೊಂಡಾಡೆ ನಗುತರಸು ನಡೆದಂ ॥ ೫೩ ॥

ಇವರ ಸೋರ್ಮುಡಿಯೆಸಕವಂಗಜನ ಮಾಮುಸಕ
ವಿವರ ನುಡಿಗಳ ಹದಿರು ಕಣ್ಣ ಚುಚ್ಚುವ ಕದಿರು
ಯಿವರ ನಡೆಗಳ ಸರಳವಟ್ಟಕೊಲುತಿಹ ಗರಳಯಿವರ ಮೊಲೆ ಜತಿಗಳ ಕೊಲೆ ।
ಇವರ ಹರೆಯದ ಹೆಚ್ಚು ವಿರಹಿಗಳೆರ್ದೆಯ ಕಿಚ್ಚು
ಯಿವರ ಮೋಹದ ಮುನಿಸು ಬಱದೆ ತೋಱುವ ಕನಸು
ಯುವತಿಯರೆನುತ್ತಲಾ ನಾಗರೀಕಂ ಪೇಳುತಿರೆ ನಡೆದನಾ ರಾಯನು ॥ ೫೪ ॥

ಪೊಡವೀಶನಿಂತು ವೇಶ್ಯಾವೀಥಿಯಂ ನೋಡಿ
ನಡೆಯಲರಮನೆಯತ್ತಲೊಂದೆಡೆಯೊಳಿರ್ದರಾ
ಕಡೆವಗಲ ನಭದಂದದಿಂದೆ ಕಣ್ಗೆಂಪೇಱಿಯುಟ್ಟಂಬರಂಗಳುಳಿದು ।
ಕೆಡೆವ ರವಿಯಂದದಿಂ ಪತಿತರಾಗುತ ದೋಷ
ಮಡಸಿರ್ದ ಮನುಜರಂದದೊಳು ಸಪ್ತಾವಸ್ಥೆ
ಯಡಸಿರ್ದರಂತೆ ತಬ್ಬಿಬ್ಬನಾಡುತ್ತ ಮಧುಪಾನದಬಲೆಯರೆಸೆದರು ॥ ೫೫ ॥

ಮಾರಿ ನಿನ್ನಯ ಕಿವಿಯೊಳಡಸಿಹುದದೇನೆನೆ ವಿ
ಚಾರವೇ ತಂಬುಲವದೆಲ್ಲಿಯುಗೆತಂದೆಯಿಾ
ಯೂರ ಹಿತ್ತಿಲ ಮರದ ಮೇಲೆಯುಗೆಯಲ್ಕೆ ತಾಂ ಪಾದರಕ್ಷೆಯ ಮಱೆದೆನು ।
ನಾರಿ ಕೊಟ್ಟಗೆಯೆತ್ತ ನಿನಗಾರು ಹೇಳಿದರು
ಹಾರುವರ ಬೆಕ್ಕದೇಂ ನುಡಿವಾಗ ಕಗ್ಗಲ್ಲೆ
ಯಾರು ಮೆಚ್ಚುವರೆಂದು ಮಧಿಸಿ ಕಳ್ಗುಡಿದ ತೊತ್ತಿರು ಕಾಳುಗೆಡೆದರಾಗ ॥ ೫೬ ॥

ಮಾಡಿ ರಾತ್ರೀವಿಹಾರಮನಿಂತು ಭೂಭುಜಂ
ಕೂಡೆ ಬಂದವರ ಬೀಳ್ಕೊಟ್ಟು ಬಳಿಕಿದಿರ್ಗೊಂಬ
ಗಾಡಿಕಾರ್ತಿಯರ ಸಂಭ್ರಮದಿಂದಲರಮನೆಯ ಪೊಕ್ಕು ಮಜ್ಜನವನೆಸಗಿ ।
ರೂಡಿಸಿದ ದಿವ್ಯಾಂಬರಂದಳೆದು ಭಸಿತಮಂ
ತೀಡಿಯಂಗದೊಳಿಟ್ಟು ರುದ್ರಾಕ್ಷೆಗಳನಲ್ಲಿ
ಪಾಡಿ ಶರಣರನೀಶಪೂಜೆಗೆಯ್ವಲ್ಲಿ ಕಡೆಗಂಡುದಿರುಳೇವಣ್ಣಿಪೆಂ ॥ ೫೭ ॥

ಬಿಡುಗಣ್ಣರಾಳ್ಮನಾನೆಯ ತಲೆಯ ರನ್ನಗೈ
ಪಿಡಿಯೊ ಮೇಣಮರ್ದುಣಿಗರೆಱೆಯ[1]ನೊಳ್ಮಗುಡದು[1]
ಗ್ಗಡದ ಮಣಿಯೋ ಗೆಲ್ಲಸೋಲಕ್ಕೆ ನೆಱೆ ಪೊಣರ್ವ ಪೊಂಬಸುಱ ಪೊಡೆಯುಲರರ ।
ಎಡೆಯುಲುದಿಸಿರ್ದಗ್ನಿದೇವರೊ ಚಕೋರಂಗ
ಳೊಡಲ ಪೆರ್ಗಿಚ್ಚೊ ಪೇಳೆನೆ ಕತ್ತಲೆಯ ತಂಡ
ವೆಡೆಗೆಟ್ಟು ತೆಗೆದೋಡೆ ಜನಿಸಿದಂ ಮಾರ್ತಂಡನೆಸೆವ ಪದ್ಮಿನಿಯ ಗಂಡ ॥ ೫೮ ॥

ಹರೆಯಲಿ ತಮಂ ಬೆಳಗು ತೊರೆಯಲಿ ಕುಮುದವೆಯ್ದೆ
ಕರೆಯಲಿಯಬುಜದೆಸಳ್ ಬಿರಿಯಲಿ ಚಕೋರಿಗಳ್
ಜರಿಯಲಿ ಪೊಣರ್ವಕ್ಕಿ ನೆರೆಯಲಿಯೆನುತ್ತೆ ದಿನತರುಣಿ ಸದ್ಭಕ್ತಿಯಿಂದೆ ।
ಸುರಪದಿಗ್ಭೂಧರವೆನಿಪ್ಪ ಮಣಿಲಿಂಗಮಂ
ಪಿರಿದಾಗಿ ಜಪಿಸಿಯರ್ಚಿಪ ಜಪಾಕುಸುಮವೆನ
ಲರರೆ ರಂಜಿಸಿದನೊಲವಿಂದೆ ಮೂಡಲ್ವೆಟ್ಟನಗ್ರದೊಳ್ ಕೆಂಗದಿರನು ॥ ೫೯ ॥

[1] ನೊಳಗುಗೊಡದು (ಗ).

ನೆರೆದ ಶತಸಾಹಸ್ರಪದ್ಮದಳವಾಡವೀ
ತರಣಿನೃಪನಂ ಕಂಡು ಹಿಗ್ಗುವಂದದೊಳು ಸರ
ಸಿರುಹಂಗಳಲರ್ದವಾ ಚಕ್ರವರ್ತಿಗಳು ಕೂಟಕ್ಕೆ ಬಂದೋಲೈಸುವ |
ಪಱಿಯಂತೆ ನಲಿಯೆ ಪೊಣರ್ವಕ್ಕಿ ಕತ್ತಲೆಯೆನಿಸು
ವಱಿಬಲಂ ತೆಗೆದೋಡಿ ಎಂದು ಕಹಳಾರವಂ
ಬಿಱಿದೆತ್ತಿ ಕರೆವಂತೆ ತಾಮ್ರಚೂಡಧ್ವನಿಗಳಿಂ ಸೂರ್ಯನುದಯವಾದಂ || ೬೦ ||

ಬಾಂಬೊಳೆಯ ಬಲ್ವೊಱೆಯ ತಲೆಯೊೞಗೆ ಪೊತ್ತು ಮಿಗೆ
ಮಿಾಂಬಳಯಿಗನ ಮಿಸುಪ ಕಿಸುಗಣ್ಣೊಳಂ ಚುರ್ಚೆ
ತಂಬೆಳಗನೊಡಲೊಡಕನಾ ಜೆಡೆಯೊಳಂ ತಾಳ್ದು ನೋಡಲತಿರಯ್ಯಮಾದ |
ಪೊಂಬರಿಜೆಯಾಣ್ಮನಚ್ಚಯನಡಿಯೊಳಿಟ್ಟು ಮೇ
ಣಿಂಬುವಡೆದೆಡಗಡೆಯೊಳುಱೆ ಪುದುಂಗೊಂಡಿರ್ಪ
ತುಂಬಿದೆಳಜವ್ವನದ ಬೆಟ್ಟಣುಗಿಯೆಱೆಯ ಪೊರೆ ನಂಬಿದೆಂ ಭೋಗಮಲ್ಲ || ೬೧ ||*

ಇದು ಸಕಲ ಭಕ್ತಪದಪದ್ಮಮಧುಕರ ಪುಣ್ಯ
ಸದನ ಗುಬ್ಬಿಯ ಮಲ್ಲಣಾರ್ಯರ ಕೃಪಾಪಾತ್ರ
ಮುದಿತ ನವರಸ ಭಾವ ಲಕ್ಷಣಾಲಂಕಾರನಿಪುಣನೆಂದೆನಿಸಿ ಮೆಱೆವ |
ಚದುರ ಚೇರಮನೊರೆದ ಚೇರಮಚರಿತ್ರಮಂ
ಪದಪಿಂದ ಬರೆದೋದಿ ಕೇಳಿ ವಿಸ್ತರಿಸುವ
ರ್ಗೊದಗಿಪ್ಪುದಾಯುರಾರೋಗ್ಯ ಸಂಪದ ಸರ್ವಸಿದ್ಧಿ ಸತ್ಯಂ ತಥ್ಯವು || ೬೨ ||



* ‘ಗ’ ಪ್ರತಿಯಲ್ಲಿ ಈ ಪದ್ಯವಿಲ್ಲ.

# ಒಂಬತ್ತನೆಯ ಸಂಧಿ

**ಸೂಚನೆ :**

ಪೊನ್ನಾಂಬಲೇಶನಂದುಗೆಯ ದನಿಗೇಳದಳಿ
ವನ್ನಿಗಂ ನಂಬಿಯೆಡೆಗಂ ಪೋದೆವೆಂದೀಶ್ವ
ರನ್ನಿಲಿಸಲಾತನುರು ಕಥನಮಂ ಚೇರಮಂಗಭವಭಕ್ತರು ಪೇಳ್ದರು ||

ಸತಿಗೊಡಲನಸುವನೊಲವಿಂ ನಿನ್ನ ತಾಯೆನಿಸಿ
ನುತಿವೆತ್ತ ಬಿಜ್ಜಮಹದೇವಿಯರ್ಗಳಿದರ್ಥ
ವಿತತಿಯ ನಂಬಿಸಂಬಂಧಿಗಳಿಗಿತ್ತು ಮೇಣ್ ಸಕುಟುಂಬ ಪೋಷಕ ರತಂ |
ಶತವಾಗಿ ಸಂಸಾರಶರನಿಧಿಯೊಳಗೆ ಮುಳುಗಿ
ದತಿಶಯದ ಲೇಪಿಯಂ ನಿರ್ಲೇಪಿಯೆಂದಹೋ
ಶ್ರುತಿಗಳಿಂತುಸುರ್ವವೈ ಮಱೆಬೇಡವೆನ್ನೊಡನೆ ಸೊಲ್ಲಭವ ಭೋಗಮಲ್ಲ || ೧ ||

ನೇಸಱುದಯದೊಳಿಂತು ನೆಲನಾಣ್ಮನೆಸಗುತಂ
ದಾ ಸಗ್ಗಿಗರ ಚುರ್ಚುವೊಳ್ ಬಿಸಂದಳೆದವನ
ಸೌಸವದ ಚೆಲ್ವಲರ್ಗಳಿಂ ಪೂಜೆಯಂ ಮಾಡಿಯರಸನಿರೆ ಬಂದು ನಮಿಸಿ |
ಆಸೀಯದರರಕ್ಕಕಂ ಕೈಯ ಮುಗಿದಾವ
ದೇಶದಿಂ ಬಂದನೋ ಕೆಱುಜೆಡೆಯ ಸುಲಿಪಲ್ಲ
ಸಾಸಿಗಂ ಜತಿಯೊರ್ವನೆನೆ ಭೂಪನಿದಿರೆದ್ದು ನಡೆದವರ ಕಾಲ್ಗೆಱಗಿದಂ || ೨ ||

ತಂದಾ ತಪಸ್ವಿಯಂ ಸಿಂಹವಿಷ್ಟರದೊಳಾ
ನಂದದಿಂ ಕುಳ್ಳಿರಿಸುತಂ ಮುಕ್ತಿಸೋಪಾನ
ವೆಂದೆನಿಪ ಸತ್ಕಾರಮಂ ಮಾಡುತಂ ದೇವನೀವಾವ ದೇಶದಿಂದ |
ಬಂದಿರಾಂ ನಿಮ್ಮಂಘ್ರಿಯಂ ಕಂಡು ಬದುಕಿದೆಂ
ತಂದೆ ನಿರವಿಪುದೆನಲು ಸುಲಿಪಲ್ಲ ಕಾಂತಿ ನಲ
ವಿಂದೆ ಪಸರಿಸೆ ನುಡಿದನಂತಲ್ಲಿ ಯತಿರಾಜನಮಿತಜನಕಲ್ಪಭೂಜ || ೩ ||

ಅಂಬುನಿಧಿಗಧಿನಾಥ ಚೇರಮಮಹೀಶ ಪೊ
ನ್ನಾಂಬಲದೊಳಿರ್ದಾವು ಬಂದೆವು ಚಿದಾನಂದ
ರೆಂಬ ನಾಮಂ ನಮಗೆಯೆನೆ ಜೀಯ ಪೇಳ್ವುದಾಸ್ಥಾನದಗ್ಗಳವಾವುದು |
ಸಾಂಬನೇನಂ ನೆಗಳಿದಂ ಕೂರ್ತು ತತ್ಕಥಾ
ಡಂಬರವನೆನಗೆ ನಿರವಿಪುದೆನಲು ಮುನಿಗಳ ಕ
ದಂಬಕಧಿನಾಯಕಂ ವಿಸ್ತರಿಸಿದಂ ನುಡಿಯ ಸಂತಸದ ಬಳ್ಳಿಗುಡಿಯ || ೪ ||

---

* 'ಗ' ಪ್ರತಿಯಲ್ಲಿ ಈ ಪದ್ಯವಿಲ್ಲ.

ಪರಶಿವ ಪರಂಗೂಢ ಶಿವತತ್ವವಂತದೇ
ನಿರವಯಂ ತತ್ಪರಾದಿ ಪ್ರಮುಖಶಕ್ತಿಯಿಂ
ವರನಿರಾಕಾರ ಸಾಕಾರದ ಸದಾಶಿವಂ ಪಂಚಸಂಜ್ಞಾರೂಪನು ।
ಪರಮಸ್ವತಂತ್ರ ಕೈಲಾಸರ್ವೇ ದಿವ್ಯಮಂ
ದಿರ ಸೋಮ ಸೋಮದಾರಾದಿ ವೃಷವಾಹನಂ
ಶರಣರೀಕ್ಷಿಪ ನಾಟ್ಯರೂಪನನುತ ಕಂಬಲಂ ನೆಲಸಿರ್ಪ ಪೊನ್ನಾಂಬಲಂ || ೫ ||

ಮೃಡಭಕ್ತರೊಡನೆ ವಾದಿಪೆನೆಂದು ಹೆಬ್ಬುಲಿಯ
ನಡರಿ ಕೊಂಕಣಜೋಗಿಯಾ ಪಯಿಂಜಾಸಿರದ
ಪಡೆಗೂಡಿ ಬರುತಿರ್ದೊಡಾಸ್ಥಾನ ಮಹಿಮೆಯಂ ಬಿಳ್ದಳಿದುದಾ ವ್ಯಾಘ್ರನು ।
ಕೊಡೆ ಪಿಡಿದು ಹಾಱಲೆಯ್ತಂದು ಕಾಪಾಲತೆಯ
ಬಿಡುತೆಱಗಿ ಭಕ್ತನಾದಂ ತನ್ನವರ್ಗೂಡಿ
ನುಡಿಯಲಳವಲ್ಲವಾ ಪೊನ್ನಾಂಬಲಸ್ಥಲವಿಶಿಷ್ಟಮಂ ಸಂತುಷ್ಟಮಂ || ೬ ||

ಶ್ರೀನಾಥಮುಖ್ಯರೀಕ್ಷಿಸುತ ಪೊನ್ನಾಂಬಲಾ
ಸ್ಥಾನದೊಳು ಶಿವನೊಡರ್ಚಿದ ಸಂಚನಱಿಯದೆ ನ
ವೀನ ತಿರುವಳದೇವರೀರಾಱುಗಾವುದದ ತಾಣದೊಳಿರಲ್ಕೆ ಕೇಳ ।
ಭೂನುತದ ತಿರುಪಿನೊಳ್ ಬಿಳ್ದ ಕುಂಡಲವನವ
ಧಾನದಿಂದುಂಗುಷ್ಟದಿಂ ಕಿವಿಯೊಳಿಟ್ಟುದುಂ
ನಾನೇನಬಲ್ಲೆನೆನೆ ಹರಿಯಜರು ನಮಿಸಿದರಲ್ಲೈ ಕೇಳು ಚೇರಮಾಂಕ || ೭ ||

ಅತ್ರಿಮುನಿಯಬಲೆಯನಸೂಯೆಗಂ ಮಕ್ಕಳ
ಪ್ಪ ತ್ರಿಮೂರ್ತಿಗಳೊಳಗೆ ಶಿವನ ಕಲೆ ದೂರ್ವಾಸ
ಗಾತ್ರನಾದಾತನೇ ಕೈಲಾದಿಯೊಡನೆ ಪೋರುತ್ತಲನ್ಯೋನ್ಯಶಾಪ ।
ಪಾತ್ರರಾಗುತ ಶೌಂಡನಾಥನಾಗಲ್ ನಂದಿ
ಗೋತ್ರಜಾಧಿಪನಾಜ್ಞೆಯಿಂ ವ್ಯಾಘ್ರಪಾದಂ ಪ
ವಿತ್ರಲಿಂಗವದಾದ ಪೊನ್ನಾಂಬಲದ ಮಹಿಮೆಯಂ ಕೇಳು ಚೇರಮಾಂಕ || ೮ ||

ಅಂತಪ್ಪ ಪೊನ್ನಾಂಬಲದೊಳಿರ್ದು ಕೇಳು ಭೂ
ಕಾಂತ ಬಂದೆವು ನಾವೆನಲ್ಕೆಯಾ ಚೇರಮಂ
ಸಂತಸವನೊಳಕೊಂಡು ಸಕಲಶಿವಶರಣರೊಳು ಲಿಂಗಪೂಜೆಗಳನೆಸಗಿ ।
ಸ್ವಾಂತವಲರುತ ಭಕ್ತತುಷ್ಟಿಯಂ ಮಾಡುತಿ
ರ್ದಂತಾದ ರಾತ್ರಿಯೊಳ್ ನಾಟ್ಯರೂಪಂ ನೆನೆವು
ತಂ ತತ್ಪುರದೊಳಿರ್ಪ ನೃಪನ ಮನದೆಡೆಗೆ ನಡೆತಂದಲ್ಲಿ ನಲಿದು ನಿಂದ || ೯ ||

ಕನಸಿನೊಳು ಸುಪ್ರಸನ್ನತೆಯಾಗಿ ರಾಜಿಸುವ
ಘನಮಹಿಮ ಪೊನ್ನಾಂಬಲೇಶಂಗೆ ವಂದಿಸುತ
ಜನನಾಥನಲ್ಲಿ ಬಿನ್ನವಿಸಿದಂ ಜೀಯ ನಿಮ್ಮಯ ನಾಟ್ಯವಾರ್ತೆಯೊಳ್ಪ।
ಅನಘ ಶರಣರು ಪೇಳೆ ಕೇಳ್ದಿನಾನಿನ್ನು ನಿ
ಮ್ಮನುಪಮ ಪದಾಂದುಕಾರಾವಮಂ ಸಲೆ ಲಾಲಿ
ಪನಿತ ಮಾಡೆನಲಂತುಗೆಯ್ವೆನೆಂದೆನಲು ಘಮ್ಮನೆ ನಿದ್ರೆತಿಳಿದೆದ್ದನು ॥ ೧೯ ॥

ನಿಸಿಗಡೆಯೊಳೆದ್ದರಸು ಕನಸಾದ ಹೆದೆಯದೊಳ್
ತಿಸುಳಿಯಾಡಿದ ನುಡಿಯ ಮನದೆಗೊಂಡಾಗ ಸಂ
ತಸದಿ ಕೆಮ್ಮಣಿ ಮುತ್ತು ಪವಳ ಪಸುರ್ವರಲು ಕಸವರಗದುರ್ಮಣಿ ಬಜ್ಜರ।
ಮಿಸುಪ ಕಱೆವಣೆ ಮತ್ತೆ ಪಸುರ್ಮೇದೆ ವೈದುರಂ
ಜಸವೆತ್ತ ರನ್ನವೊಂಬತ್ತರಿಂ ನಾಡೆ ಮಾ
ಡಿಸಿದನೀಶಂಗೆ ಪೆಕ್ಕಣವನೆಯ ನೆನೆಯಲೆಯಿತಂದಳಾ ದುಗ್ಗಿಯಿನಿಯ ॥ ೧೧ ॥

ಆ ಮಂಟಪದ ಜವನಿಕೆಯ ಮಱೆಗೆ ಬಂದು ಗಿರಿ
ಜಾಮನೋಹರನಪ್ಪ ಪೊನ್ನಾಂಬಲೇಶ್ವರ
ಶ್ರೀಮನ್ಮಹಾನೃತ್ಯಮಂ ನಟಿಸೆ ನಟನಶಾಸ್ತ್ರಂಗಳಂ ನಲಿದು ಪೇಳ್ದ।
ಸ್ವಾಮಿಯ ಪದಾನರ್ತನದ ತಾಳಲಕ್ಷಣ
ಪ್ರಾಮಾಣ್ಯದಂದುಕೌಘಂ ಘಲಿಲು ಘಲಿಲೆಂಬ
ಸಾಮರ್ಥ್ಯರಾವಮಂ ಕೇಳ್ದನಾನಂದದಿಂ ಭೂಮಂಡಲಾಧೀಶನು ॥ ೧೨ ॥

ತೆಗೆ ಮಿಸುಪ ಜೇನೆಯ್ಯ ತಂದಲೆಂದೆಂಬುದಂ
ಬಗೆಯಲೇತಕ್ಕೆ ಸಗ್ಗಿಗರಮರ್ದು ಸವಿಯನೆಳೆ
ವಗನ ನಲ್ಮೆಯ ತೊದಲ್ನುಡಿಯದೇಂಬಾರ್ತೆ ನಱುಜವ್ವನದ ಸೊಗಸುಗರೆವ।
ಮುಗುದೆವೆಣ್ಗಳ ಸೋಂಕದೇತಕಿದಱಿದಿರಲ್ಲಿ
ಜಗದೀಶ್ವರಂ ನರ್ತನಂಗೆಯ್ವ ಪಾದದಂ
ದುಗೆಯ ದನಿಯಾ ಚೇರಮನ ಕರ್ಣದೊಳ್ಪೊಗುವ ಸೊಗಕವೇನೆಣೆವರ್ಪವೆ ॥ ೧೩ ॥

ವೇದನಾಲ್ಕಱಿಸಿ ಕಾಣದ ಶಾಸ್ತ್ರಷೋಡಶಂ
ಸಾಧಿಸಲ್ಕಱಿಯದಿಪ್ಪತ್ತೆಂಟು ತಂತ್ರವ
ಷ್ಟಾದಶಪುರಾಣವಾ ದ್ವಾತ್ರಿಂಶದುಪನಿಷತ್ತುಗಳಲಿಯುತನ್ವೇಷಿಪ।
ಆದಿಪೊನ್ನಾಂಬಲೇಶನೆ ಬಂದು ನರ್ತಿಸುವ
ಪಾದದಂದುಗೆಯ ಮಂಜುಳ ರವಂ ಕರ್ಣಕಾ
ಹ್ಲಾದಮಂ ಕೊಟ್ಟುದೆನೆ ಚೇರಮನ ಭಾಗ್ಯಕ್ಕೆ ಸಮವುಂಟೆ ಮುಕ್ತಿ ಗೆಂಟೆ ॥ ೧೪ ॥

ಚಾರಲಿಂಗಂ ನುಡಿದ ವಾಕ್ಯವನೆ ಕೂರ್ತು ಮದ
ನಾರಿ ಕೈಕೊಂಡು ನಟಿಸುವ ಮಾಳ್ಕೆಯಿಂ ನಿಚ್ಚ
ಲಾ ರವ್ಯವಾದ ಜವನಿಕೆಯ ಮಱೆಯಲ್ಲಿ ಕುಣಿವುತ್ತೊಂದು ದಿವಸದಲ್ಲಿ ।
ಮಾರಾರಿಯಡಿಯಂದುಗೆಯ ರಾವವದು ಕೇಳ
ಬಾರದಿರೆ ನೊಂದು ಹವ್ವನೆ ಹಾಱಿ ಕಂಗೆಟ್ಟು
ಚೇರಮಂ ಪುಣ್ಯಹೀನಂ ತಾನೆನುತ್ತಶ್ರುವಿಂ ನನೆದನಲ್ಲಿ ನೆನೆದಂ ॥ ೧೫ ॥

ನಿಲಿಸಿ ದಿಟ್ಟಿಯನು ಲಿಂಗಧ್ಯಾನ ಚಿಂತನೆಗೆ
ಸಿಲುಕಿ ಜೀವಾನಿಲನ ಸೂಸಿ ಮೂಲಾಗ್ನಿಯು
ಜ್ವಲಿಸಿ ನಿಜಪರಮಕಾಷ್ಠೆಯೊಳಶನದಿಚ್ಛೆಯಱತಲ್ಲಿ ಮನವಿಕಳವಾಱ ।
ಸಲ್ತಮೌನಮುದ್ರೆಯಿಂದೀಶನೊಳ್ ಲೀನವಾ
ಗೊಲವಿನಿಂದುತ್ಕ್ರಾಂತಯೋಗಕ್ಕೆ ತನ್ಮನಂ
ಚಲಿಸುತಿರೆ ಯೋಗಿ ವಿರಹಿಣಿಯಂತೆ ನೃಪನುಮಾವರನವಸ್ಥೆಯೊಳಿರ್ದನು ॥ ೧೬ ॥

ಪೊಡವೀಶನೆಂತಕ್ಕೆ ತಿಳಿದೆದ್ದು ಭಕ್ತಿಯು
ಗ್ಗಡದ ವೀರತ್ವಮಿಮ್ಮಡಿಸೆ ಮೂದಲಿಸುತ್ತ
ನುಡಿದನೆಲೆ ಶಂಕರಾ ನೀಂ ಕೂರ್ತು ಬಂದು ಜವನಿಕೆಯ ಮಱೆಯಲ್ಲಿ ಕುಣಿದು ।
ಅಡಿಯಂದುಗೆಯ ದನಿಯ ಕೇಳಿಸುತ್ತಿರ್ದೀಗ
ಬಿಡುವಾಗಲೇನೂಣೆಯಂ ಕಂಡೆಯೆಂದು ಘುಡು
ಘುಡಿಸುತ ಕರಾರಿಯಂ ನಿಷ್ಠೆಗುಪಕಾರಿಯಂ ಕಿಳ್ತನಘಕುಲವೈರಿಯಂ ॥ ೧೭ ॥

ಅನಿತರ್ಕೆಯಶರೀರವಾಕ್ಕಿಂದೆ ಬೇಡಬೇ
ಡೆನುತ ನುಡಿದಂ ಶಂಭು ಚೇರವಾ ಕೇಳಯ್ಯ
ನಿನಗಿನಿತು ರಾಜಸ್ವವೇಕಯ್ಯ ನಿನ್ನಲ್ಲಿ ಭಕ್ತಿಯೇಂ ಕುಂದಾದುದೆ ।
ಅನಘ ನಂಬ್ಯಣ್ಣನುತ್ತಮದ ತಿರುಪಾಡಿಂದೆ
ನೆನೆಯೆ ತಿರುವಾರೂರ್ಗೆ ಪೋಗಿರ್ದು ನಾವು ಘ
ಮ್ಮನೆ ಬಂದೆವೆಂದು ಕುಣಿದಂ ಮತ್ತೆ ಭರ್ಗನಾನತದತ್ತ ಮುಕ್ತಿವರ್ಗ ॥ ೧೮ ॥

ಎಂದು ಪೊನ್ನಾಂಬಲೇಶನ ನಿರೂಪಕ್ಕೆ ನಲ
ವಿಂದೆ ವಿಸ್ಮಿತನಾಗಿ ಕೇರಳಾಧೀಶನಾ
ನಂದಿಸುತ್ತಿಂತೀಶನಂ ವಶಂ ಮಾಡಿಕೊಂಡಾತನಾರೆನುತ ತನ್ನ ।
ಮುಂದಿರ್ದ ಭಕ್ತರೊಳಗಲ್ಲಿಯಾರೂರಿಂದೆ
ಬಂದಿರ್ದ ಮಾಹೇಶ್ವರರನು ಬೆಸಗೊಂಡೊಡವ
ರಂದು ನಿರವಿಸಿದರಾ ನಂಬಿಯಣ್ಣನ ಕಥೆಯ ದಿಕ್ಕ ಧವಳಿಸುವ ಸುಧೆಯ ॥ ೧೯ ॥

ನಲ್ಗಱಕೆಯಣುಗಗಿನಿಸಿಂ ಮುನ್ನ ಬಜ್ಜರದ
ರಲ್ಗೈದಿನುಣಿಸಱತರೆಱೆಯ ಬಗ್ಗಡಗೆ ಕಡೆ
ಗೋಲ್ಗೆಯ್ದು (?)ಬಲ್ವೆಟ್ಟ ಕಣ್ಗಿವಿಯರಾಣ್ಮನಂ ನೇಣ್ಮಾಡಿ ತಂದೊಡರ್ಚೆ ।
ಪಾಲ್ಗಡಲ್ಗಡೆಯಲಾ ರಕ್ಕಸರ್ಗೂಡಿ ಸಿರಿ
ಸಾಲ್ಗುಮೆನ್ನರುಮೆನುತ್ತೆಲರುಣಿಗಳರಸನುಗ
ಳಲ್ಗಾಡಿಯಿಂ ಚುರ್ಚುವಾ ಬಿಸಂಬಿಡಿದನಾ ಕಲ್ಗುವರಿಯುರಿಮೆಯ್ಯನು || ೨೦ ||

ಮಿಸುಪ ಚೆಂಗೈದಳದೊಳಿರ್ದ ನಂಜೊಳ್ಪೊಳೆವ
ಪಸಿವರೆಯದೊಳ್ಪರಿಜು ಪೊಱಮಟ್ಟು ಪೂದರ್ಪ
ಬಿಸಜಾಕ್ಷಿ ಕನಕಲತೆ ಕಾಂತಿಮತಿಯರ್ಗೊಲಿಯೆ ಗೊರವ ನುಡಿಗೇಳ್ದು ನೆಲಕೆ ।
ಎಸೆವ ತಿರುಣಾವಲೂರಲ್ಲಿಯಾ ಶಿವಪಾರ್ವ
ನೆಸೆದನಾ ಜೆಡೆಯನ್ಯೆನಾರುಯಸ್ಯಜಾ ನಿ
ವಸುಱಲ್ಲಿಯೊಗೆದಾಗ ನಂಬ್ಯಣ್ಣನೆಂದೆಂಬ ಪೆಸರೊಳೊಪ್ಪುತ್ತಿರ್ದನು || ೨೧ ||

ಏಳುವರುಷದ ಹರೆಯದೊಳು ನಂಬಿಯಣ್ಣಂ ಸ
ಮೇಳದೊಳಗಾಡುವೆಳಮಕ್ಕಳೊಡಗೂಡಿ ತಾಂ
ಧೂಳಿನ್ನದೆಸೆವ ಬಂಡಿಯೊಳೋಡುತಿರಲು ನರಸಿಂಗವೊನೆಯರ ಮದಗಜ ।
ತಾಳಿ ಸಪ್ತಾವಸ್ಥೆಯಂ ಬರುತ್ತಿರಲಿರ್ದ
ಬಾಲಕರು ಕೆಟ್ಟೋಡೆ ಕಂಡಿಭಂ ನಮಿಸೆ ಕ
ಟ್ಟಾಳೊರ್ವನಿರೆ ಕೇಳುತವರ ಮನೆಗುತ್ತುಂಗಚೋಳನೃಪನೆಯ್ತಂದನು || ೨೨ ||

ಅವರ್ಗೆ ಬೇಳ್ಪನಿತು ವಸ್ತುವನಿತ್ತು ಬೀಳ್ಕೊಂಡು
ಕುವರನಂ ರಕ್ಷಿಸುತ್ತಿರೆ ವಯೋಧರ್ಮವೊದ
ಗುವ ಕಾಲದಲ್ಲಿ ನರಸಿಂಗವೊನೆಯಾರು ತುಂಬುರಮಂತ್ರಿಗಂ ನೇಮಿಸೆ ।
ತವಕದಿಂ ವಣಿಮಂದ ಪುತ್ರೊರೊಳೊಬ್ಬ ಭೂ
ಧವಸುತೆಗೆ ನಿಶ್ಚಯದ ತಾಂಬೂಲವೀಯೆ ವೈ
ಭವದಿಂ ಪ್ರಧಾನಿಯಂ ಕೂಡಿ ಮದವಣಿಗ ನಂಬ್ಯಣ್ಣನಂ ನೃಪತಿ ಕಳುಪೆ || ೨೩ ||

ವೈವಾಹಕಾಲಮುಪ್ಪನ್ನೆಗಂ ನಿಬ್ಬಣದ
ಠಾವಪ್ಪ ವನದೊಳಿರೆ ಕೈಲಾಸದಿಂ ಶಿವಂ
ಶೈವವೃದ್ಧಬ್ರಾಹ್ಮಣಾಕಾರದಿಂ ಬರೆ ಗೃಹಾಧಿಪಂ ಸತ್ಕಾರದಿಂ ।
ನೀವಾರಿದೇಕಿಲ್ಲಿಗೆಯ್ತಂದಿರೆನಲೆಮ್ಮ
ಸೇವೆಯಂ ಮಾಳ್ಪ ತೊತ್ತಿನ ಮಗನವಂಗೆ ನೀಂ
ಮಾನವನೇಕಾದಪ್ಪೆ ಎಂದು ಮುಱದೊಡೆದು ಮಂಗಲವಮಂಗಲವೆನಿಸಿದಂ || ೨೪ ||

ಶತವೃದ್ಧನಿವನ ಮುಟ್ಟದೊಡಳಿವನೆಂದಲ್ಲಿ
ಯತಿವಿನಯದಿಂ ಕಳುಪೆಯೊಡ್ಡೋಲಗದೊಳು ಭೂ
ಪತಿಪುತ್ರನಿರಲಿಟ್ಟ ಬಾಯ್ ತೊಟ್ಟಂತೆ ನೀನೆಮ್ಮ ತೊತ್ತಿನ ಕಂದನು।
ಮತಿಗೆಟ್ಟೆಯಾ ಸೇವೆಯಂ ಮಾಡು ಬಾರೆಂದೆ
ನುತ ನುಡಿದ ಮುದಿಯನಂ ಕೊಲ್ವೆನೆಂದೇಳೆಯಾ
ಸ್ಥಿತಿಗೆ ಸರ್ವೋಪಚಾರದೊಳಿರ್ದರಂ ತಿಳುಪುತಿರ್ದನಂತಾ ಪ್ರಧಾನಿ ॥ ೨೫ ॥

ಪುಲ್ವಿಡಿದು ಮೊಱೆಯಿಡುವನಾ ಮುದಿಯನಂತವನ
ಕೊಲ್ವೆನೆಂದೆಳ್ದನಾ ಸೌಂದರಂ ತುಂಬುರಂ
ಮೇಲ್ವಾಯಬೇಡೆಂದು ನಿಲಿಸಿ ನರಸಿಂಗಮೊನೆಯರ ನಿರೂಪವನು ಪಡೆದು।
ನಾಲ್ವರೇನಂ ಪೇಳಿದಂತೆ ಕೇಳುವವೆಂದು
ಚೆಲ್ವನೊಡಗೂಡಿ ತಿರುವೆಣ್ಣೆನಲ್ಲೂರ್ಗೆ ಬರೆ
ಸಾಲ್ವಿಡಿದಿದಿರ್ಗೊಂಬ ವಿಪ್ರರಂ ಜಱೆದು ಮಂಟಪದಲ್ಲಿ ಮಂಡಿಸಿದನು ॥ ೨೬ ॥

ಈವೂರ ಮುದಿಪಾರ್ವನೆಮ್ಮ ವಿಲಗದವನೆಂ
ದಾ ವಿಪ್ರರಂ ಜಱೆಯಲವರು ನಡುಗುತ್ತಲಿಲೆ
ದೇವ ನಿಮ್ಮಾಶ್ರಿತರು ನಮ್ಮೊಳಂತಪ್ಪರಿಲ್ಲೆನೆ ತೊಡಗಿದಾತನಾವ।
ರಾವಿನೊಳಗಿರ್ದಪ್ಪನೆಂಬನಿತಕಂ ಜಗಳ
ದಾ ವಿಗಡನಾಕಸ್ಮಿಕಂ ನಿಂದುಸುರ್ವ ವಂ
ಶಾವಳಿಗಳಂ ಪೇಳೆ ಕುಱುಹಪ್ಪುದೆಂದವರು ಮನ್ನಿಸುವ ಕಾಲದಲ್ಲಿ ॥ ೨೭ ॥

ಪಳನಂಟುಗಳ ಬೆದಕದಿರಿ ವಿಪ್ರರಿರ ನಿಮ್ಮೊ
ಳೊಳಜೊತ್ತೆಯೋದಿಸಿರೆ ವೃದ್ಧಪತ್ರವನೆನಲು
ಘಳಿಲನಾವೂರ ಕರಣಿಕನೋದಿ ತಮ್ಮಜ್ಜಗಳ ಬರಹವಪ್ಪುದೆಂದು।
ಅಳಲದಂ ಸೀಳೆ ಮಾಱೋಲೆಯಿವೂರ ಶಿವ
ನಿಳಯದೊಳಗಿರ್ದಪುದೆನುತ್ತೋಡಿ ತಲ್ಲಿಂಗ
ದೊಳು ಪೊಗಲ್ಮಱುಗಿ ನುತಿಸುವ ಸೌಂದರಂಗಂ ಪ್ರಸನ್ನನಾದಂ ಶಂಕರಂ ॥ ೨೮ ॥

ಅಱಿದು ಸರ್ವವನೀಶಗಾಳಾಗೆ ನಂಬಿಗಾ
ತೆಱದೆ ತುಂಬುರನಲ್ಲಿ ಬಂಟನಾಗಲು ನಿನಗೆ
ತೆಱಗೆ ದೇವಾಲಯಕೆ ಪೊನ್ನು ಸಾಸಿರವೆಂದು ಶಂಭು ಕಳುಹಿದೊಡೆ ನಾಡ।
ಎಱೆಯನಿದಿರ್ವಂದು ವಂದಿಸೆ ತಂದೆತಾಯಿರ್ವ
ರಱೆಕೆಯಿಂ ನುತಿಸೆಯಂತವರ ಸತ್ಕರಿಸುತ್ತೆ
ಪೊಱಮಟ್ಟು ಬರಲು ಪೆರುಮಳಲಿಯ ಕುಱುಂಬರಾ ಗುಡಿಗಟ್ಟಿ ಕಂಡು ಕುಣಿದಂ ॥ ೨೯ ॥

ಗ್ರಾಮದೊಳ್ ಪೆಕ್ಕಣಗೊಡುತ್ತನಾರೆಂಬ ಗೌ
ರೀಮನೋಹರನಲ್ಲಿ ಭಸಿತಮಂ ಕೊಡೆ ಬಳಿ
ಕಾ ಮನೋಹರದ ವಲ್ಮೀಕಪುರವೆಸೆವ ತಿರುವಾರೂರು ತಾನಾದುದು |
ಆ ಮಂತ್ರಿ ಪೇಳೆಯೊಳಪೊಕ್ಕಡಂತಲ್ಲಿಗಂ
ತಾ ಮಾತೆಪಿತರರೆಯ್ತುರಲಕ್ಷ್ಯಯಾರ್ಥಮಂ
ಸ್ವಾಮಿ ಕೊಡುತಂ ದಿವ್ಯಬೋಧೆಯಂ ಪೇಳಿ ಕೇಳ್ದಂ ಸೌಂದರಾಧೀಶನು || ೩೦ ||

ಮುನ್ನ ಕೈಲಾಸದೊಳಗಣ ಕನಕಲತೆ ತಾನೆ
ಯುನ್ನತವೆನಿಪ್ಪ ಮಂಗಲೆನಾಚಿಯೆಂಬವಳ
ಕನ್ನಿಕೆಯೆನಿಸಿ ಪರವೆನಾಚಿನಾಮಂದಳೆದಳಧಿಕಯುವ್ವನ ರೂಪದ |
ಪನ್ನತಿಕೆಯಿಂದೆ ಶಿವನಿಲಯ ನೃತ್ಯವನಾಡು
ವನ್ನೆಗಂ ಸೋಲ್ತರನ್ಯೋನ್ಯತ್ವದಿಂ ಮಹೇ
ಶನ್ನಂಬಿಗಂ ಶರಣಸಖನೆನಿಸಿಕೊಂಬ ಕುಂಟಣಿಯಾಗಿ ಕೂಡಿಸಿದನು || ೩೧ ||

ಪರವೆಯ ಕುಚಾಗ್ರದೊಳು ಶಿವನನೋಯೆನಿಸಿ ಸಾ
ಸಿರಪೊನ್ನ ಕೊಂಡು ಮಂಗಲೆ ನಾಚಿಗೀವುತ್ತೆ
ತಿರುಕೊಂಡೆಯೂರ ಶಿವನಿಂ ವಿತ್ತಮಂ ನೆಲ್ಗಳಂ ಪಡೆದು ಮತ್ತೆ ಪಾಡೆ |
ಹರನದೃಶ್ಯವದಾಗೆ ತಿರುಕೊಳವಿಯೆಂಬೂರ
ಪೊರೆಯ ಗದ್ದೆಯೊಳು ಕಳೆಗೀಳ್ವರೊಳಗೊರ್ವನಾ
ಗಿರಲಱಿದು ಬಂದು ನುತಿಯಿಸೆ ಮೆಚ್ಚಿ ನಂಬಿಯೆಂದೆನ್ನ ಪಾಡೆಂದನೀಶಂ || ೩೨ ||

ಪಾಡುಪಾಡಿಗೆ ಸಾಸಿರಚ್ಚಿತ್ತು ನಿಲಿಸೆಯವ
ನೀಡಾಡೆ ತಿರುಕೊಂಡೆಯೂರ ಶಿವಕೊಂಡದೊಳ
ಗಾಡಂಬರದ ನಂಬಿ ಪೋಪನಿತಕೀಶ್ವರಾಜ್ಞೆಯೊಳು ಮರುಳಡಕೆ ಪುರದ |
ಗಾಡಿಯೆನಿಸುವ ಕೇರಿಯೊಳು ನೆಲ್ಲರಾಶಿಗಳು
ನಾಡೆ ತಿರುವಾರೂರ ಕೊಳನೊಳಗೆ ಪೊನ್ಬರಲು
ಮಾಡಿ ಶಿವನುತ್ಸಹವನಖಿಲರ್ಗೆ ಕೊಟ್ಟು ಸುಖಮಿರ್ದನಾ ಸೌಂದರೇಶಂ || ೩೩ ||

ಮಂಗಳೆಗೆ ಧನವೀಯಲುತ್ತರಕೆ ಸೌಂದರೇ
ಶಂ ಗಮಿಸುತಿರೆ ಮುನ್ನ ಕೈಲಾಸದಲ್ಲಿ ಮುನಿ
ಪುಂಗವರ್ಗೆ ನಿಷ್ಕಾಮಮಂ ಪೇಳೆ ಗಿರಿಜೆ ಕಣ್ಮುಚ್ಚೆ ನೀಂ ಕಾಳಿಯಾಗು |
ಅಂಗನೆಯೆನಲ್ದೇವನಬಳಿ ತಪವಿರೆ ಬರ್ಪ
ಗಂಗೆ ಕಂಪಾಹ್ವಯಳ ಬಾಧೆಗೀಶನನಪ್ಪೆ
ತುಂಗಕುಚದೊಳ್ಗುಱಿಪಿನೇಕಾಮ್ರನಾಥನಿಹ ಕಾಂಚೀಪುರಕೆ ಬಂದನು || ೩೪ ||

ಮತ್ತೆ ಕೈಲಾಸದೊಳಗಣ ಕಾಂತಿಮತಿಯೆ ತಿರು
ವತ್ತಿಯೂರೀಶಾನ್ಯಸೆಟ್ಟಿಯಂಗನೆಗೆ ಪು
ಟ್ಟುತ್ತ ಸಂಕಿಲೆನಾಚಿಯಾಗಿ ಯವ್ವನದೊಳವಳೀಶನಂ ಭಜಿಸೆ ಕಂಡು ।
ವಿತ್ತಪತಿಸಖನನಂತಾ ನಂಬಿ ಪೋಗೆನೆ ಬ
ರುತ್ತ ಸತ್ಕರಿಪ ಶಿವದೇವಿಯಂ ಕಳಿಪಿದಂ
ಮತ್ತನುಜಗಂ ನಿನ್ನ ಮಗಳ ಕೊಡವೇಳ್ಕೆಂದೊಡೀಶನೆಂದಱ ದುಸುರ್ದಳು ॥ ೩೫ ॥

ನಿನ್ನ ಮಕ್ಕಳೊಳಾಱುಮೊಗದವಂ ಗಜಲಪನ
ನುನ್ನತದ ಕೋರದಾಡೆಯ ವೀರನಿವರೊಳಾ
ರೆನ್ನ ಮಗಳಿಗೆ ತಕ್ಕ ವರನೆಂದೊಡೆಲ್ಲರ್ಗೆ ಕಿಱಿಯ ಸೌಂದರನೆಂದೆನೆ ।
ಇನ್ನು ಸಂಶಯವೇಕೆ ಕೊಟ್ಟೆನೆನೆ ಕೇಳ್ ಮಗಳೆ
ಮುನ್ನೊರ್ವ ಸೂಳೆವೆಣ್ಣವಗುಂಟು ಸೂರುಳಿಪು
ದೆನ್ನವನೆನುತ್ತ ಬಂದೀಶನಟ್ಟಿದೊಡೆ ಮಾತಾಡಿ ಬಂದಾಗ ನಂಬಿ ॥ ೩೬ ॥

ದೇವ ನಿನ್ನಯ ಗುಡಿಯನುಳಿದು ಮರದಡಿಯೊಳಿರು
ಮಾವನಂಗನೆಗೆ ಸೂರುಳುಗೆಯ್ವೆನೆಂದಿರಿಸೆ
ಯಾ ವಿಶ್ವಪತಿ ಬರ್ಪ ಶಿವದೇವಿಯೊಳ್ನುಡಿದನೀ ವೃಕ್ಷದೊಳಗಿರ್ಧೇನೆ ।
ನೀವಿಲ್ಲಿ ಶಪಥಮಂ ಮಾಡಿಸುವುದೆಂದೊರೆದೊ
ಡಾ ವನಿತೆಯಂತು ಮಾಡಿಸಿ ಮಗಳನೀಯೆ ಶೋ
ಭಾವಹದೊಳಾ ಸಂಕಿಲೆಯೊಳು ಸುಖಮಿರ್ದನಾ ನಂಬಿ ಮೂರ್ಬರಿಸಂಬರಂ ॥ ೩೭ ॥

ಭವ ನಿರೂಪದೊಳು ಪರವೆಯ ಪವನನೆಯ್ತರಲ್
ತವೆ ಸಂಕಿಲೆಯ ಬಿಟ್ಟು ತಿರುಗೆ ಕಂಗೆಡೆ ಮುನ್ನ
ಕವಿ ಬಾಣ ಕಾಳಿದಾಸಾಂಬಿಗಳ ಕಥೆಗಳ ತುಂಬುರನೊರೆಯೆ ಕೇಳಿ ನಂಬಿ ।
ಶಿವೆಯಿಂದೆ ಕಾಂಚಿಯೊಳ್ ನಯನವೊಂದಂ ಪಡೆವು
ತವೆ ಬಂದು ಬೇಳ್ಪ ವಸ್ತುಗಳಟ್ಟೆ ಮಂತ್ರಿಯಂ
ಯುವತಿಯರು ಮಂಗಲೆಯನುಜ್ಞೆಯಿಂ ಜಡಿದೊಡೆದು ಚಲ್ಲಿದರನರ್ಘ್ಯಗಣನು ॥ ೩೮ ॥

ಅದ ಕೇಳಿ ನಂಬಿ ವಾಲ್ಮೀಕನಾಥನ ಪಾಡಿ
ಸದನಕ್ಕೆ ಕಳುಪೆಯಾ ಶಂಕರನ ಕಾಣುತ್ತೆ
ಪದಕೆಱಗಿ ಮಂಗಲೆ ನಿಜಾತ್ಮಜೆಯ ವಿರಹಭಾಧೆಯ ಪೇಳಿ ಸೌಂದರನನು ।
ಮುದದಿಂದೆ ತಂದು ನೀಂ ಪರವೆಯೊಳು ನೆರೆಗೂಡಿ
ಬದಿಕೆಸೆಂದಾಡಿ ದೈನ್ಯಂಬಡೆ ಮಹೇಶ್ವರಂ
ಹೆದಱದಿರು ನಾವವನ ಕಳುಪೆ ಕಟಕಿಯನಾಡಿ ಮೊಗಗೆಡಿಸಿ ತಗುಳಿಯೆಂದಂ ॥ ೩೯ ॥

ಎನುತ ದೇವಾಲಯಕೆ ಬಂದೆಲೆಲೆ ನಂಬ್ಯಣ್ಣ
ನಿನಗಾಗಿ ನಾವು ಕೋಟಲೆಬಟ್ಟು ಪೇಳ್ದೆವೆಂ
ದೆನೆ ನಿನ್ನ ಲೆಂಕನಂ ಸಲಹೆ ಬಳಲಿದಿರೆಂದು ಪೋಗೆ ಸಿಂಗರಿಸಿಕೊಂಡು ।
ನಿನುತ ದರ್ಪಣವನೀಕ್ಷಿಸುತೊಂದು ಕಣ್ಗಂಡು
ಕನಲಿ ಕನ್ನಡಿಯನೀಡಾಡಿ ಶಿವಧೋ ಶಿವನೆ
ಎನಗಿಂತುಟೇ ಪರವೆ ನಗಳೆಯಕ್ಷಿಯು ಪಾಲಿಸೆಂದು ಮೊಱೆಯಿಟ್ಟು ಪೇಳ್ದಂ ॥ ೪೦ ॥

ಕಣ್ಗೊಟ್ಟು ಕಳುಪೆ ಸಿಂಗರಿಸಿ ಬರೆ ಪರವೆಯರ
ಪೆಣ್ಗಳಱೆಯಟ್ಟಯಿವರಾರಯ್ಯ ಸಂಕಿಲೆಗೆ
ನಾಣ್ಗೆಟ್ಟ ಬೊಜಗರೆ ತೆಗೆವ ಕದಹಲ್ಲೆಂದು ಮೂದಲಿಸಿ ನುಡಿಯಲಾಗಿ ।
ಬಿಣ್ಗಂದಿ ತಿರುಗಿ ಶಿವನಂ ಪತ್ರವಂ ಬೇಡೆ
ಜಾಣ್ಗುರುವ ಬಾರೆಂದು ತಾನೆ ಕರೆದೊಯ್ದವರ
ತಣ್ಗಲ್ಲ ಮುಗಳಾಳ್ಮನೊಂದಿಸೆ ವಿಯೋಗ ಸತಿಯೊಳ್ಕೂಡಿದಂ ಶಂಕರಂ ॥ ೪೧ ॥

ಸುಸಿಲೊಳೊಂದಿರ್ದ ಪೊಳ್ತಱೆಯಲ್ಲಿ ಶಿವಪಾರ್ವ
ನೊಸೆದು ಕಮ್ಮಲರೀಯೆ ನಂಬಿಯಾರೆನೆ ಬರಹ
ಬಿಸಿಯಲ್ಲಿ ಬೇವೆನ್ನ ಪೊರೆದ ಸೋಮಾಸಿಮಾರನೆ ಪರವೆ ಪಡೆವಳ್ಳನ ।
ಪೊಸಪೊಂಗೊಡೆನೆ ಜೀಯ ಬೇಡ ಜನ್ನಕೆ ಕಳುಪು
ತಿಸುಳಿಯನೆನಲ್ಕೆ ಬಿಣ್ಪಿನ ಕಜ್ಜವೆಂದಿರ್ದೆ
ನೆಸೆವ ಜೊನ್ನೊಡಲದಲೆಯನ ಕಳುಪುವೈಸಲೆಯೆಂದು ಕಳುಹಿದನಲ್ಲಿಗೆ ॥ ೪೨ ॥

ಸರ್ವಜ್ಞನೆನಿಪ ಸೋಮಾಸಿಮಾರಂ ರಜತ
ಪರ್ವತಕ್ಕಟ್ಟಿ ಬಿರಹದ ಸಂಕಿಲೆಯ ಪರವೆ
ಯೊರ್ವರೊರ್ವರ ಕೂಡುತಿರುಗಿ ತಪದಿಂದಂಗದೊಳು ರುದ್ರಪಾದಾಂಕಮಂ ।
ಪೂರ್ವದೊಳ್ಪಡೆದ ಗಯೆಗಸ್ಥಿಯಟ್ಟುವ ನೃಪತಿ
ಯಿರ್ವರಾ ಮಾತೆಪಿತರರ್ಗೆ ದೃಷ್ಟಂದೋಱ
ಶರ್ವರೀಪತಿ ಮಕುಟನವರ್ಗೆ ಗಣಪದವೀಯೆ ನಂಬಿ ಸುಖದಿಂದಿರ್ದನು ॥ ೪೩ ॥

ಶ್ರೀಕುಡಿಯೆನಿಪ್ಪ ಪೊಳಲೊಳಗೆ ಕಲಿಕಾಮನೆಂ
ಬೇಕಶಿವನಿಷ್ಠನೀ ನಂಬಿಗೀಶ್ವರನೊಲಿದ
ನೇಕಪ್ರಕಾರಮಂ ಬಿತ್ತರಿಸೆ ಭಕ್ತರದ ಕೇಳಿ ಹರುಷಿಸಿ ಬಳಿಕ್ಕ ।
ಪ್ರಾಕಟದ ಸೂಳೆ ಪರವೆಯ ಮನೆಗೆ ನಂಬಿ ವಾ
ಲ್ಮೀಕಿದೇವನನೆ ದೂತಟ್ಟುವನೆನಲ್ಕೇಳ
ಸಾಕವಂ ದುಷ್ಟನಾ ನಂಬಿಯೆಂದಿನ್ನಾರು ನುಡಿದವನ ಕೊಲ್ವೆನೆಂದು ॥ ೪೪ ॥

ಎಂದು ಭಾಷೆಯ ನುಡಿವುತಾರೂರ್‍ದೆಸೆಯಿಂದ
ಬಂದಿವೆಂಬವರ ಬಡಿದಟ್ಟುತಿರೆ ಕೇಳುತ್ತ
ಸೌಂದರಂ ಶೂಲಿಯೊಳಃ ನುಡಿದನೀ ಕಲಿಕಾಮನೇಕುಣ್ಣದುಱುವನೆನಲು ।
ಕಂದ ಕೇಳ್ ಪರಮುಸ್ವತಂತ್ರರ್ಗಳೆನ್ನವರ
ವಂದಿರ ಮಹತ್ವಮಂ ಬಲ್ಲರಾರೆನೆ ಹಿಡಿದು
ತಂದಪ್ಪೆನವನನೆಲೆ ದೇವಯೆನಗಿದಿರೆ ಕೇಳೆಂದು ಗರ್ಜಿಸಿ ನುಡಿದನು ॥ ೪೫ ॥

ಹಿಡಿದು ತಂದಪ್ಪೆಯಾ ಕಲಿಕಾಮನಂ ಮಗನೆ
ನಡೆಯೆಂದು ಕಳುಪುತಂ ನಂದೀಶನಂ ಕರೆದು
ಮೃಡನೆಂದನೆಮ್ಮ ಗಣತತಿಗೂಡಿ ಮುಱಿಯೊಳಿರ್ದೀ ನಂಬಿ ದಂಡು ಬರಲು ।
ಪಡಿಬಲಂ ನೀನಾಗಿ ಸಂದೇಹಿಸದೆ ಬೆನ್ನ
ಬಡಿದಟ್ಟು ಎಂದು ನೇಮಿಸಿ ಕಳುಹೆ ಸೌಂದರಂ
ಹೊಡೆಯಿಸಲು ನಿಸ್ಸಾಣಂಗಳಂ ಕೂಡಿತ್ತು ಬಳಿಕಂತು ಮುಱಯಲೆಂದು ॥ ೪೬ ॥

ಘೂರ್ಮಿಸುತ ಗಜ ಹಯ ಪದಾತಿ ರಥ ತತಿಯಿಂ ಮ
ಹೋರ್ಮಿ ಸಾಗರದಂತೆ ಕವಿದು ಬಹುವಾದ್ಯದಿಂ
ಕೂರ್ಮನಳ್ಕಲು ನಡೆವ ಸೌಂದರನ ಕಹಳಾರವಂಗೇಳಿ ಕಲಿಕಾಮನು ।
ದುರ್ಮಾರ್ಗಿಯಾರೂರವನ ಬಲವೆ ಹಾಯೆಂದು
ನೂರ್ಮಡಿ ಪರಾಕ್ರಮದೊಳಿದಿರಾದ ವೇಳೆಯಾ
ಧರ್ಮಸ್ವರೂಪ ನಂದೀಶಾದಿ ಗಣನಿಕರವಾರ್ಭಡಿಸಿ ಕವಿದರಾಗ ॥ ೪೭ ॥

ಬೆರಳ ಬೊಬ್ಬೆಗಳಿಂದ ಹೊಯ್ವ ನಿಸ್ಸಾಣದಿ
ಗಿರಿಯ ಚೆಂಡಾಡುವರು ನಂದಿವಾಹನ ಶೂಲ
ಕರದ ಡಮರುಗ ಜಟಾ ಪಂಚಮುಖದಧಟರಂ ಕಾಣುತ್ತ ನಂಬಿಯ ಬಲಂ ।
ಇರದೆ ಕಂಗೆಟ್ಟೋಡಿ ಹುತ್ತೇಱ ನಾಡೆ ಪ
ಲ್ಗಿರಿದು ಪುಲ್ಗಚ್ಚುತ್ತ ಮಾಡಬಾರದ ದೈನ್ಯ
ವೆರಸಿ ಭಂಡಾಗಲಾ ನಂಬಿಯಂ ತಗುಳತೊಡಗಿದನಲ್ಲಿ ಕಲಿಕಾಮನು ॥ ೪೮ ॥

ಎಲೆಲೆ ಪಾತಕ ಹೋಗದಿರು ಹೋಗದಿರು ನಿನ್ನ
ತಲೆಯಿಱುವೆನೆಂದಟ್ಟ ನಂಬಿಯಂ ಹೊಯ್ವುತಿರೆ
ಕಲಿಕಾಮನಂ ತಡೆದು ಸತ್ವಗೆಟ್ಟೋಡೆ ನಂಬಿಯಂ ನೂಂಕಿಕೊಂಡು ನಡುವೆ ।
ಸಲೆ ಮಿಾಱ ಹೋಗುತಿರಲಟ್ಟುವನನೊದವಿಸುತ
ಬಲಿದು ಮೂರ್ಗಾವುದಂ ತಗುಳಿಸಿದನೀಶನಾ
ನೆಲೆಯಲ್ಲಿ ಬೀಳೆ ನಿನ್ನಯ ಸೀಮೆ ಪರವಾದಿ ಬದುಕಿದ್ದೆ ಹೋಗೆಂದನು ॥ ೪೯ ॥

ಎಡಹಿ ಬಿದ್ದೆದ್ದು ಸಂದೇಹಿಸುತ ತನ್ನ ತಲೆ
ದಡಹಿಕೊಂಡೆಂತಕ್ಕೆ ಬದುಕಿದೆಂ ಸಿಲ್ಕೆ ತಡೆ
ಗಡಿವನಾ ಕಲಿಕಾಮದೇವನೇಗೆಯ್ವನೂರ್ಗೋಡಿ ಬಿಸಗೊರಲನವಗೆ ।
ಮೃಡನೆಂಬ ನಾಮವೇಕೆಂದು ಬರೆ ಮಗನೆ ನೀ
ಪಿಡಿತಂದೆಯಾಯೆನೆ ಶಿವಂ ಮೂಗನರಿದು ಕೈ
ಪಿಡಿದೊರ್ವ ಬೇಗ ಕೊಡು ಕೊಡು ಕೊಟ್ಟೆನೋಲೆಯಂ ಕಡೆಯಿದೆಂದಂ ಸೌಂದರಂ॥ ೫೦ ||

ಮೊದಲೊಳೇ ಬೇಡೆಂದೆವೈ ನಾವೆ ಪೋಪೆವೆಂ
ದುದಿತ ಜಂಗಮವೇಷದಿಂ ಬಂದೊಡಿದಿರೆದ್ದು
ಪದವನೊಲವಿಂ ಪಿಡಿದು ಮುಂದೆ ಖಂಡೆಯವಿಟ್ಟು ದೇವರೂರಾವುದೆನಲು ।
ಮುದದೊಳಾರೂರೆನುತ್ತಲ್ಲಲ್ಲಿ ಪೊನ್ನಾಂಬ
ಲದೊಳಿರ್ದು ಬಂದೆವೆನೆ ಕಾಲ್ದೊಳೆದು ಕುಳ್ಳಿರಿಸಿ
ಮದನಾರಿ ಕಲಿಕಾಮನಳಲಬೇಕೆಂದಾಡಿದಂ ನಂಬಿ ನಂಬಿಯೆಂದು || ೫೧ ||

ನಂಬಿದೈ ಗುರುವನೆಲೆ ನಂಬಿದೈ ಚರವನುಱೆ
ನಂಬಿದೈ ಲಿಂಗಮಂ ನೀನೆನಲು ಮುನಿವುತೀ
ಡಂಬೇಕೆ ಮತ್ತೊಂದು ನುಡಿಯಬಾರದೆಯೆನಲು ನಂಬಿದವರಂ ನಂಬಿದೈ ।
ಎಂಬುದಿದು ದೋಷವೇ ಕಲಿಕಾಮಯೆನಲಾಗಿ
ನೀಂ ಬಂದ ಕಾರ್ಯವೇನೆಲೆ ದೇವಯೆನೆ ಬೀದಿ
ಗಂಬಾದೆನುತ್ತೆ ಕರೆದಿದಿರಲ್ಲಿ ಗೋಡೆ ಮರ ಕಲ್ಲಿಲ್ಲದಂತೆ ನೋಡಿ || ೫೨ ||

ಸರುಸಮಂ ನೋಡುತ್ತಲೋಡಲನುವಾಗುತ್ತ
ಶರಣ ನಿನ್ನಂ ನಂಬಿ ನುಡಿವವೇಯೆಂದು ಸೌಂ
ದರನಂಬಿಯಣ್ಣನೊಳ್ಕಲಹವೇಕವನೇ ಮಹಾಪುರುಷನಾತನೊಡನೆ ।
ಎರವಿಲ್ಲದಂತೆ ಕೂಡಿಹುದೆಂದು ಸರಿದೋಡು
ತಿರೆ ವಿಗಡ ತಪಸಿ ಹಾಯೆಂದು ತಗುಳಿದನಹೋ
ಕರದ ಖಂಡೆಯವನುರೆ ಜಡಿವುತ್ತ ಕಲಿಕಾಮದೇವನಘವನದಾವನು || ೫೩ ||

ಜಡೆಬಿಟ್ಟು ಕೆದಱೆ ರುದ್ರಾಕ್ಷೆಗಳ್ಪಱಿದೊಗಲು
ಹಿಡಿದ ಲಾಕುಳವನೀಡಾಡಿ ಭಸಿತಂ ಕದಡೆ
ಯೊಡಲ ಬೆವರುಣ್ಮೆ ಕೋವಣವೊಂದೆಸೆಗೆ ಸರಿಯಲೋಡುತಂ ಬಯಲಾಗುವಂ ।
ಮೃಡನ ಕಂಡಾಗ ಹಿಂದಕೆ ತಿರುಗೆ ಕಲಿಕಾಮ
ನೊಡನೆ ಬಂದೂರ್ವೊಕ್ಕು ನಂಬಿ ಕೇಳ್ ತಗುಳಿದಂ
ಪಡೆಯ ಕೂಡಿನ್ನೊಮ್ಮೆ ಮಗನೆಯೆನೆ ಕೆಟ್ಟೆನಾನಡಿಯಿಡುವನಲ್ಲೆಂದನು || ೫೪ ||

ಮೇಲವನ ಕೃತಕದಿಂ ಗೆಲಬೇಹುದೆಂದೆನುತ
ಶೂಲಿಯಂ ಕಳುಪೆಯಾತಂ ನೋವುತಿರ್ದೊಡಾ
ಕಾಲದೊಳು ಬರ್ಪ ನಂಬಿಯು ಕಹಳೆಯಂ ಕೇಳಿಯಿಱದುಕೊಂಡಳಿಯಲಾಗಿ |
ಪಾಲಿಸುತ್ತಸಃವಗಿದು ಮಱುಜನ್ಮವೆಂದವರ
ಲೀಲೆಯಿಂದೊಂದು ಮಾಡುತ್ತ ಕಲಿಕಾಮನಂ
ಕೈಲಾಸಕೊಯ್ದನೀಶ್ವರನಿತ್ತ ಸುಖಮಿರಲು ನಂಬಿ ಮಹಿಮಾವಲಂಬಿ || ೫೫ ||

ಪಿರಿದು ಬೇಂಟೆಯು ನೆವದೊಳುಪವಾಸ ಜಾಗರಣೆ
ಹರಪೂಜೆಯಾದುದಂದೆಸೆವ ಸಂಕಣ್ಣಂಗೆ
ತರುಣಿಯಾ ಶ್ವಪಚಿಗೊಗೆದಾ ಸುತೆಯುರಂ ರಮಿಸಿದಘಕೂಟ ಸುಕುಮಾರಗೆ |
ದೊರೆಗೆಟ್ಟು ಹಸಿದು ಸೊಪ್ಪಂ ಮಾಱಬಂದಧಮ
ನರನಪ್ಪ ಧಾವಂತ ಮೊದಲಾದವರ್ಗೆ ನಿಜ
ತರಮಪ್ಪ ಮುಕ್ತಿಫಲವಿತ್ತ ಶಿವರಾತ್ರಿಯಂ ಮೆಱೆ ಮಿಂಡನೊಡರಿಚಿದನು || ೫೬ ||

ಮೆಱೆ ಮಿಂಡನಃಂ ಭಕ್ತರಿರೆ ನಂಬಿಯಂತವ
ರ್ಗೆಱಗದೆ ಸಪಾದುಕೆಯೊಳೀಶಾಲಯಂಬೊಗಲು
ಹೊಱಗಿಡಲು ಶಿವಸಹಿತಲೋಡಿ ಬನವೊಕ್ಕುಭವನಾಜ್ಞೆಯೊಳವಂ ಬರುತ್ತ |
ಅಱುವತ್ತುಮೂವರಂ ಪಾಡೆ ಹರುಷಿಸಿ ತಿಳುಹೆ
ಕಱೆ ಗೊರಲನಂತವರ ಕೈಲಾಸಕೊಯ್ದನಾ
ಪೆಱೆದಲೆಯನಣುಗನಿರ್ದಂ ಚಾರುಸೌಂದರಂ ನಿಜಧೈರ್ಯಗುಣಮಂಧರಂ || ೫೭ ||

ಅಂತಲ್ಲಿ ನಂಬಿಸುತಿರಲ್ಕೆ ವಲ್ಮೀಕನಾ
ಥಂ ತಡೆಯದೊಲಿಯಲ್ಕೆ ಚಾತುರಂಗದ ಬಲಂ
ಮುಂತಾದ ಪಲವು ಸಿರಿಯಂ ಬೇಡೆ ತಿರುನಾಗಪಟ್ಟಣಕೆ ಬಾರೆಂದೊಡೆ |
ಸ್ವಾಂತವಲರುತ್ತಿಯ್ದಿ ಬಳಿಕ ಕೊಂಡಾಡಲಾ
ಚಿಂತಾಯಕಂ ಮೆಚ್ಚಿ ಗುಹಗಣಪರೊಡನೆ ನೀ
ವಿಂತೆನಗೆ ಸಮಭಾಗಿಯಾಯೆನುತ್ತಾಕ್ಷೇಪದಿಂ ಪತ್ರಮಂ ಬೇಡಿದಂ || ೫೮ ||

ಮಚ್ಚಿ ಧನ ಕನಕ ವಾಹನ ವಸ್ತ್ರ ಮಣಿಗಳೊಳ್
ಪಚ್ಚಪಲ್ಲವದ ಸತ್ತಿಗೆಯಂದಳಂ ಮಿಸುಪ
ಪಚ್ಚಗಪ್ಪುರವಾದಿ ವಸ್ತುವನೆಱಂಕೆವಡೆದಿರ್ಪ ಪಚ್ಚೆಯ ಕುದುರೆಯ |
ಒಚ್ಚತಂಗೊಟ್ಟುಮೇಶಂ ಕಳುಪೆ ಬೀಳ್ಕೊಂಡು
ನಚ್ಚಿನ ಶರಣ ನಂಬಿ ತಿರುಮಡಮರಂದೂರಿ
ಗಚ್ಚರಿ ಎನಲ್ಕೆ ಸಂಭ್ರಮದಿ ಬಂದಂ ಸುಗುಣವೃಂದನಾನಂದದಿಂದೆ || ೫೯ ||

ಕರಿಕಾಲಚೋಳನುಱೆ* ಮಾಡಿದಾ ಬ್ರಹ್ಮೇತಿ
ಪರಿಹರಿಸಿದಾ ತಾಣವೆಂದೆಱಂಗುತ್ತಲ್ಲಿ
ಯರರೆ ನುತಿಸುತ್ತೆ ಪಡಿವೊನ್ನಳಂ ಪಡೆದು ತಿರುವಾರೂರ್ಗೆ ಬಳಿಕ ಬಂದು ।
ಪರವೆ ಸಂಕಿಲೆಯರೊಳ್ ಸುಸಿಲಿಂಪನೊಡರಿಚು
ತ್ತುರುತರದ ಶರಣಸೇವೆಯನೆಯ್ದೆ ಮಾಡುತ್ತೆ
ಪರಮಸಂತೋಷದಿಂದೊಪ್ಪಿರ್ದನಾ ನಂಬಿ ಶಿವಪದಾಂಬುಜಕೆ ತುಂಬಿ || ೬೦ ||

ಆರೂರ ಭಕ್ತರಾ ನಂಬಿಯಣ್ಣನ ಪೂರ್ವ
ಪಾರಂಪರೆಯ ಕಥೆಯನಿಂತು ಬಿತ್ತರಿಸಲಾ
ಚೇರಮಮಹೀಶ್ವರಂ ಪುಳಕಗದ್ಗದಮುಣ್ಮುತಿರೆ ನಯನದಶ್ರುಧಾರೆ ।
ಸೋರುತಿರೆ ಕೇಳಿಯಾನಂದಿಸುತ್ತಲ್ಲದೊಡೆ
ಚಾರು ಪೊನ್ನಾಂಬಲೇಶಂ ನೃತ್ಯಮಂ ಬಿಡು
ತ್ತಾರಯ್ಯ ಪೋಪನೇಯೆಂದವನ ನೋಳ್ಪುದಂ ತೊಟ್ಟನೊಳ್ಪಿರ್ದೆಯೊಳಿಟ್ಟಂ || ೬೧ ||

ವೈಕುಂಠನುಗ್ಗಡಿಸಿ ಬರೆ ಶೋಭನಂ ಪಾಡೆ
ಮೂಕೋಟಿ ವಾಣಿ ಬಂದಿಡೆ ಮುಹೂರ್ತವನೆ ತಲೆ
ಹೋಕ ಪಾರ್ವಂ ಸಿತಾಂಗಂ ಭಗಾದಿತ್ಯರೊಲವಿಂದೆತ್ತೆ ಕೈದೀಪಮಂ ।
ಆ ಕಾಲದೊಳ್ ನಾಗರಂ ಮೆಟ್ಟೆ ಶೂನ್ಯದೊಳ್
ಮಾಕಾಳಿಯಂ ಮದುವೆಯಾಗಿ ವಿಘ್ನಂಗಳನ
ನೇಕಮಂ ಜಯಿಸಿದ ಮಹಾಕರುಣಿ ಸಲಹೆನ್ನ ನೀ ಕೂರ್ತು ಗಂಗಾಧರ || ೬೨ ||

ಇದು ಸಕಲ ಭಕ್ತಪದಪದ್ಮ ಮಧುಕರಪುಣ್ಯ
ಸದನ ಗುಬ್ಬಿಯ ಮಲ್ಲಣಾರ್ಯರ ಕೃಪಾಪಾತ್ರ
ಮುದಿತ ನವರಸ ಭಾವ ಲಕ್ಷಣಾಲಂಕಾರ ನಿಪುಣನೆಂದೆನಿಸಿ ಮೆಱೆವ ।
ಚದುರ ಚೇರಮನೊರೆದ ಚೇರಮ ಚರಿತ್ರಮಂ
ಪದಪಿಂದ ಬರೆದೋದಿ ಕೇಳಿ ವಿಸ್ತರಿಸುವ
ರ್ಗೊದಗಿಪ್ಪುದಾಯುರಾರೋಗ್ಯ ಸಂಪದ ಸರ್ವಸಿದ್ಧಿ ಸತ್ಯಂ ತಥ್ಯವು || ೬೩ ||

---

* 'ಗ' ಪ್ರತಿಯಲ್ಲಿ ಈ ಪದ್ಯವಿಲ್ಲ.

# ಹತ್ತನೆಯ ಸಂಧಿ

**ಸೂಚನೆ :**

ಆರೂರೊಳಭವನಾಡಿದ ನಾಟ್ಯಮಂ ನೋಡಿ
ಚೇರಮಂ ಪೊನ್ನಾಂಬಲಾದಿ ಸುಕ್ಷೇತ್ರಮುಮ
ನೋರಂತೆ ನಿಟ್ಟಿಸುತ ನಂಬಿಯಂ ಕಳುಪಿ ಪುರಮಂ ಪೊಕ್ಕು ಸುಖಮಿರ್ದನು ||

ಹೆಂಗಳ ಶಿರೋರತ್ನವೆನಿಪ ಗಿರಿಜಾತೆಗ
ರ್ಧಾಂಗಮಂ ನಲಿದಿತ್ತ ದೇವಂಗೆ ಬೇಸಱದೆ
ತಿಂಗಳಿಂಗಳ ಪೊತ್ತುಗಣ್ಗಳಾಗುಳ್ಳ ದಿವ್ಯಾಂಗಂಗೆ ಫಣಿಪತಿಗಳ |
ಭಂಗಾರವಾಗಿ ತನ್ನಂಗದೊಳು ತಾಳ್ದ ಮಹಿ
ಮಾಂಗಂಗೆ ಸತ್ಕೃಪಾಂಗಂಗೆ ಮೋಹನತ
ರಂಗಂಗೆ ಮಾಂಗಲ್ಯಕರ ಭೋಗಮಲ್ಲೇಶಲಿಂಗಂಗೆ ವಂದಿಸುವೆನು || ೧ ||

ಜಾಣ್ಮಾತುಗರು ಪೇಳ್ದ ಸೌಂದರನ ಕಥೆಯನೆಳೆ
ವೆಣ್ಮನೆಗ ಮರಗೂಳ ಜೊನ್ನೊಡಲ ನೇಸಱಿ*ೊಳ್
ಕಣ್ಮಲರನಂ ಕೂರ್ತು ನಂಬಿ ದೂತಟ್ಟುವನೆನಿಪ್ಪ ಜಸಮಂ ಕೇಳುತ
ನಾಣ್ಮಯ್ಯನಂ ಪಳಿವ ಭೋಗಿ ಚೇರಮಗೆ ಪೊಱ
ಪೊಣ್ಮೆ ಪುಳಕಂ ನೋಡುವಕ್ಕಱಿಂದಂ ಭೇರಿ
ಯುಣ್ಮಲೆಂದಾರೂರ್ಗೆ ಸಂಭ್ರಮದೆ ತನ್ನೃಪಂ ಪೊಱಮಡುವ ಕಾಲದಲ್ಲಿ || ೨ ||

ಹರಡೆ ಹಂಗಂ ರಾಸಭಂ ದರ್ದುರಂ ಗೌಳಿ
ದರುಶನ ಸ್ವರವನಾ ವಾಮಭಾಗದೊಳೀಯೆ
ಯರಲೆ ಕಾಕಂ ಹಸುಬನಾ ನಕುಲವಿವು ಬಲದೊಳಂ ತೋಱಿ ದನಿಮಾಡಲು |
ಪರಿಪಕ್ವಫಲವೀಶ ವಿಪ್ರಯುಗ ಮಾಹೇಶ
ದರುಶನಂ ತನ್ನಿದಿರು ಕಟ್ಟನೊಳ್ಮೆಱೆ*ಯೆ ಸೌಂ
ದರನ ಕಾಣ್ಬುದಕೆ ಪುರಮಂ ಚೇರಮಕ್ಷಿತೀಶಂ ಕೂರ್ತು ಪೊಱಮಟ್ಟನು || ೩ ||

ಬಲಚೇಷ್ಟೆಯಂ ತೋಱಿ ಝೂಡಣೆಯುಲಿಸಗಿ ಮಿಗೆ
ಕೆಲೆದು ಸುಸ್ವರದೊಡನೆ ಮಿತ್ರಸ್ವರವನಿತ್ತು
ನೆಲೆಯಿಂದಲುನ್ನತಸ್ಥಾನದ ತಳಿರ್ತ ಪಾಲ್ಗೊಂಬಿನೊಲ್ಮನೆಯ ಮಾಡಿ |
ಒಲೆಯದಾಗುಳಿಸದಗ್ನಿಸ್ವರವನೀಯದು
ಜ್ವಲ ಶಾಸ್ತ್ರಸಿದ್ಧ ಶುಭಸೂಚನೆಯ ಜೋಡುಪಿಂ
ಗಲಿಗಳುಱೆ* ತೋಱಿ ನಡೆದಾ ನೃಪಂ ಪೊಱಬೀಡಬಿಟ್ಟನಾ ಕಾಲದಲ್ಲಿ || ೪ ||

---

* 'ಗ' ಪ್ರತಿಯಲ್ಲಿ ಈ ಪದ್ಯವಿಲ್ಲ.

ವಾರಿನಿಧಿಮಧ್ಯದೊಳ್ ಮಾರ್ಪೊಳೆವ ರವಿಬಿಂಬ
ವಾ ರಮ್ಯವಡಬಾನಳಂ ತನಗಿದಿರ್ಚಿತೆಂ
ದಾರಯ್ಯದತಿಮುಳಿಸಿನಿಂ ಕೊಲ್ವ ಮಾಳ್ಕೆಯಿಂದಿನನಿಳಿಯಲಪರಾಬ್ಧಿಗೆ |
ಆ ರಾಯನಾ ವೇಳೆಯಾ ಪಟ್ಟಣದ ಕಾಪಿ
ಗೋರಂತೆ ತಕ್ಕವಂದಿರನಿರಿಸಿ ಶಿವನಂಘ್ರಿ
ಸಾರಸವನಾ ನಂಬಿಯಣ್ಣನಂ ನೆನೆದು ನಿದ್ರಿಸಲಿರುಳು ಕಡೆಗಂಡುದು || ೫ ||

ಇರುಳೆಂಬ ಹೊನಲದಾಗಸವಟ್ಟೆಯೊಳ್ ಪರಿದು
ಪೊರಳೆ ಕತ್ತಲೆಯೆಂಬದಿರು ಪೆಚ್ಚಲದನುಡುಗಿ
ದುರುಳ ಬಿದಿಯೆಂಬ ಕಮ್ಮಱನಾ ಚಕೋರ ವಿರಹಾಗ್ನಿಯಿಂ ಕರಗಿ ತಂದು |
ಮರಳಿ ಪೂರ್ವಾದ್ರಿಯಂಬಡಿಗಲ್ಲ ಮೇಲದಿನಿ
ತುರುಳದಂತಿಟ್ಟ ಕರ್ಬೊನ್ನ ಕೆಂಘಟ್ಟಿಯೆನೆ
ವಿರಳವಿಲ್ಲದ ಸೂರ್ಯಮಂಡಲವದುದಯಕಾಲದೊಳು ಕೆಂಪಡರ್ದಿರ್ದುದು || ೬ ||

ಪಾರ್ಥಿವಾನ್ವಯ ಚೇರಮಂ ಶಂಕರಾರ್ಚನೆಯ
ನಾರ್ತದಿಂದುದಯಸಮಯದೊಳೆಸಗಿ ತನ್ನಯ ಸ
ಮರ್ಥಮಂತ್ರಿಗೆ ನಿರೂಪಿಸಿ ದಂಡ ತೆರಳಿಸುತ ಚತುರಂಗಬಲ ವಿಭವದಿ |
ವ್ಯರ್ಥದಿವಸಂಗಳಾಗದ ತೆಱದೊಳಂತಧಿಕ
ತೀರ್ಥಲಿಂಗಂಗಳಂ ಮಾಡಿ ಕತಿಪಯದಿನಂ
ಸ್ವಾರ್ಥದಿಂ ನಡೆತರುತ್ತಿರೆ ಬಂದುದಾ ಗ್ರೀಷ್ಮಕಾಲವತ್ಯುಷ್ಣಜಾಲ || ೭ ||

ಖಗನೆ ರಥಿಕಂ ಜನರ ಬೆಮರಿಸುವ ಝಳವೆ ಮದ
ವೊಗುವ ಸೊಕ್ಕಾನೆಯಂತಾ ಮರೀಚಿಕಜಲಂ
ಸೊಗಸುವ ಬಯಲ್ಗುದುರೆ ರವಿಪದಾನೀಕವೇ ಮಿಸುಪ ಕಾಲಾಳ್ಗಳಾಗೆ |
ಜಗದೊಳ್ ವಿರಾಜಿಪ ಚರಾಚರರನಳ್ಕಿಸುತ
ಮಿಗೆ ತರಣಿಯುಷ್ಣಕರವೆಂಬ ಕರವಾಳ್ಗಳಿಂ
ದೊಗೆದುದಾ ರಾಯ ಬೇಸಗೆ ಬಿಸಿಲು ದೆಸೆದೆಸೆಗೆಯೆಸಗೆ ಕಾಳ್ಗಿಚ್ಚು ಮಸಗೆ || ೮ ||

ಕೆಱೆತೊಱೆಗಳಂ ರಸಾತಳಕೆ ತಗುಳುತ್ತೆ ಮೇ
ಣುಱುವ ಬಾಂಬೊಳೆಯನಾ ಶಿವನ ಜೆಡೆಯೊಳ್ಪೊಱಸಿ
ಮೆಱೆವೇಳುಕಡಲನೇಳುಂ ದ್ವೀಪಮುಂ ಕೂಡಿ ವರುಣನಂ ಕಾಲ್ಗೆಡಿಸುತೆ |
ನೆಱೆಯೆ ವನದುರ್ಗಮಂ ಸುಟ್ಟುರುಪಿ ಗಿರಿದುರ್ಗ
ದಱೆಗಳಂ ಸಿಡಿದು ಹಾಱಿಸಿ ಘೂರ್ಮಿಸುತೆ ನಾಡೆ
ತಳ್ಱಿಸಂದು ಬಂದನಾ ಗ್ರೀಷ್ಮಭೂಪಾಲ ಬಹುಪಥಿಕಜನರೆರ್ದೆಯ ಶೂಲ || ೯ ||

ಎನ್ನರಸಿಯುತ್ತಮದ ಪದ್ಮಿನಿಗೆ ಸಿರಿಗೆ ಸಲು
ವುನ್ನತದ ಕಮಲಾಖ್ಯವಾಯ್ತೆಂದು ವಾಸಿಯಿಂ
ದನ್ನಾಡೆ ಬಡಿಹೋರಿ ಮಿಗಗಳಿರ ಕಮಲಾಭಿಧಾನಮೇ ನಿಮಗೆನುತ್ತ ।
ತನ್ನುಷ್ಣಕರದಿ ಕೊಲೆಕವಿಗಳಾಡಿದರು ರವಿ
ನಿನ್ನಾಣೆಯೆಂದು ಪುಲ್ಗಚ್ಚಿ ಮೊಱೆಯಿಡುವಂತೆ
ಸನ್ನರ್ದವಾದ ಬೇಸಗೆಯಲ್ಲಿ ಮೆಱೆದುವಾ ಹರಿಣಂಗಳೇನೆಂಬೆನು ॥ ೧೦ ॥

ನೆಟ್ಟನಡಸಿದ ಬೇಸಗೆಯ ಬಿಸಿಗೆ ಧರಣಿ ಕಂ
ಗೆಟ್ಟು ಬಾಯಾಱಿ ಮುನ್ನುಳ್ಳ ನೀರಂ ಪೀರ್ದು
ತೊಟ್ಟನಾ ಮೇಘವೊಲಿದಂದಿತ್ತ ಸವಿಗೆಯುದಕಿಲ್ಲೆಂಬುದಂ ನೋಡದೆ ।
ಬಿಟ್ಟ ಬಾಯಿಂ ನಾಡೆ ಕೇಳ್ದಪ್ಪುದೆನೆ ಕೆಱೆಯ
ನಟ್ಟು ನಡು ಬೀಟಿಯೆಸೆದವು ದಾನಿ ತಮಗೆ ಪೊಂ
ಗೊಟ್ಟನೆಂದವನ ದಾರಿದ್ರ್ಯಕಾಲದೊಳಿರಿವ ಮೂಢರೋ ಎಂಬಂದದಿ ॥ ೧೧ ॥

ಆ ರೌದ್ರಮಪ್ಪ ಬೇಸಗೆಯ ಕಾಲದೊಳಧಿಕ
ಚೇರಮ ಮಹೀಶ್ವರಂ ತಾ ಪೊಳ್ತಿನಲ್ಲಿ ಮಿಗೆ
ಸೌರಂಭದಿಂ ದಂಡು ತೆರಳಿ ಸಿಂಗರಿಸಿದ ಬಿಡಾರಂಗಳಂ ಪೊಗುತ್ತ ।
ಶ್ರೀರಾಜರಾಜರೊಡರಿಚುವುಲುಪೆ ಮುಖ್ಯ ಸ
ತ್ಕಾರಮಂ ಕೈಕೊಳುತ ಬರವರಲ್ ಮೆಱೆದುದೊಂ
ದಾರಣ್ಯ ಕಾಠಿಣ್ಯಗುಣ್ಯ ಬಹುವೃಕ್ಷಾಗ್ರಗಣ್ಯ ಕಾನನವರೇಣ್ಯ ॥ ೧೨ ॥

ಧಾರುಣಿಯೊಳಾ ದುಷ್ಟಬುದ್ಧಿ ಗೋಮಯುವನೇ
ಸೂರಿ ಮುನಿಪಗೆ ಭಿಕ್ಷವಿತ್ತಳಿಯೆ ಯಮುನಾ ವಿ
ಚಾರ ಶಿಕ್ಷೆಯ ಮಾಡುವಲ್ಲಿ ನಡೆತಂದು ಬಿಡಿಸುತ್ತ ಜನ್ಮವನೆ ಕೊಡಿಸಿ ।
ಸಾರದ ಸುಬುದ್ಧಿಯೆನಿಸಿದವಂಗೆ ತೋಱಿಸುತ
ನಾರಕಸ್ವರ್ಗಮಂ ತದ್ರಕ್ಷನಾದನೀ
ವಾರದರುಷಿಯ ಪೋಲ್ವ ತಾಪಸರು ಮೆಱೆದರಾರಾರಣ್ಯ ಮಧ್ಯದಲ್ಲಿ ॥ ೧೩ ॥

ಧರೆ ಬಿರಿಯಲುರಗನ ಫಣಾಮಣಿಯ ದೀಪ್ತಿ ವಿ
ಸ್ಫುರಿಸಿದವುದೋ ಬೇಸಗೆಯ ಬಿಸಿಲ ಬೇಗೆಗಾ
ಧರೆ ಬೆಂದು ನಿಂದುರಿದವುದೊ ಮೇಣು ಧರೆ ರತ್ನಗರ್ಭೆಯೆಂದೆಂಬ ಪೆಸರ ।
ಪಿರಿದಾಗಿ ಕನ್ನಡಿಸಿದವುದೊ ಕೋಷ್ಟದೊಳಗ್ನಿ
ಪರಿಜುವೆತ್ತುದೊ ಪಸಿಯ ಕಾಳ್ಕಿಚ್ಚೊ ಪೇಳೆನಲ್
ದೊರೆವೆತ್ತು ರಂಜಿಸುವುದಾ ವನಾಂತರದೊಳಗೆ ಪೂತ ಮುತ್ತುಗದ ವೃಕ್ಷಂ ॥ ೧೪ ॥

ಸುರಪನಂತಿಂದ್ರ ವಾರುಣಿಯಿಂದೆಯಗ್ನಿಯಿಂ
ತುರುಚಿತ್ರಮೂಲದಿಂ ಕೀನಾಶನಂತೆ ವಿ
ಸ್ತರಮಾದ ಲುಬ್ಧಕ ಪ್ರಕರದಿಂ ಮಿಗೆ ನಿಶಾಚರನಂತೆ ಘೂಕಂಗಳಿಂ ।
ವರುಣನಂತೆಸೆವ ಮಡಿವಸಲೆಯಿಂ ಮರುತನಂ
ತರರೆ ಪರ್ವತದಿಂದೆ ಧನಿಕನಂದದೊಳೆ ಸಿಂ
ಗರಗದುಗಿನಿಂ ಶಿವನ ತೆಱದೊಳಾಲದಿನೊಪ್ಪಿತಾ ಘೋರತರ ಕಾನನಂ ॥ ೧೫ ॥

ಮಿಸುಗುವ ಸಿಱುಂಬಿನಿಂದೆಡೆವಿಡದಿಱುಂಬಿನಿಂ
ದೊಸರ್ವೊರ್ಜ್ಜರಂಗಳಿಂದಾ ಸಜ್ಜರಸಗಳಿಂ
ದೆಸೆದೆಸೆಯ ಹಣೆಗಳಿಂ ಬೆಟ್ಟಗಳ ಡೊಣೆಗಳಿಂ ಸರುವಿನಿಂದಾ ದರುವಿನಿಂ ।
ಜಸವಡೆದ ಪಳ್ಳದಿಂದಂತಲ್ಲಿ ಕೊಳ್ಳದಿಂ
ಪೆಸರ್ವಡೆದ ಮೊಱಡಿಯಿಂದಾರ್ಬಡಿಸ ಕರಡಿಯಿಂ
ಪೊಸ ಪುಲಿಗಳಿಂ ಬೇಂಟೆಗೆಯ್ತಪ್ಪ ಕಲಿಗಳಿಂ ಮೆಱೆವರಣ್ಯಂಬೊಕ್ಕನು ॥ ೧೬ ॥

ಇಡಿದ ರಾಜಾರ್ಕವೃಕ್ಷಂಗಳಿಂ ತಂಪುವಂ
ಕಿಡಿಗಳಂ ಕರೆವ ಬಲ್ಗಲ್ಗಳಿಂ ಮಿಗೆ ಕುಮುದ
ದೆಡೆಗೊಂಡ ಕಮಲಾಹ್ವಯಗಳಿಂ ರಂಜಿಸುವ ಕುಜ ಮೃಗಾನೀಕಂಗಳಿಂ ।
ಒಡನೆಸೆವ ಮಂಜುವೆಳಗಿಂ ಕೂಡಿರುಳ್ಪಗಲ
ಬಿಡೆ ಪೋಲುತಿಂತೊಪ್ಪುವಚ್ಚರಿಯ ಬಿಂಜವಂ
ಪೊಡವೀಶ ಚೇರಮಕ್ಷಿತಿಪಾಲ ಸದ್ಗುಣವಿಶಾಲನೀಕ್ಷಿಸುತ ನಡೆದಂ ॥ ೧೭ ॥

ಕೆಂಗದಿರ್ ದಟ್ಟೈಸಿ ಬಿಂಜದೊಳ್ ಕರೆಯಲ್ಕೆ
ಯಿಂಗಳವನುಱೆ ಚಲ್ಲಿದಂತೆ ಧರೆ ಕಾಯ್ದಿರಲು
ಕಂಗೆಡುತ್ತಿರದೆ ನೆಳಲೊಳಗಿರಲ್ಕೇಣಸೊಂದಿರೆ ಸತಿಯುದಱಿಸಿ ಕಂಡು ।
ಸಾಂಗವೇಯೆನೆಯನ್ಯವಱಿಯೆ ನಾನೆನೆ ಕೆಂಪು
ರಂಗಿಸುವಶೋಕೆಯುರಿಯಂತಿರಲು ನೀಂ ಪೊಕ್ಕು
ಪಿಂಗದುರೆ ಜಯಿಸೆನಲು ಜಯಿಸಿತ್ತು ನನ್ನಿಯುಳ್ಳವರ್ಗೆ ಬಿಸಿ ಪಸಿಯಾಗದೆ ॥ ೧೮ ॥

ಕೋಯಂಡಕೇಱದೊಳ್ದಿರು ಡೊಣೆ ಪುಣಂಬು ಪೇ
ಡಾಯತದಿ ಕಟ್ಟೆರ್ದ ಗೇಣೆಸೆವ ಕೈಪೊಡೆಯ
ದೋಯೂರದಿಂ ಮೆಱೆಯೆ ಸೊವಡನಾರ್ಯೈವುತ್ತ ನಾಯ್ಗಳುರೆ ಕೂಡೆ ಬರಲು ।
ಆಯೆಡೆಯ ಬಿಂಜದೊಳ್ ಬಿಯದವಡೆ ಮಿಗೆ ಸೊಪ್ಪ
ದಾಯದಿ ನಿಱುಂಬು ಸರು ದರು ಕೊಂಬು ಪಣೆಯೊಳ್ ವಿ
ಡಾಯದಿ ಬೆದಂಕುತೆಯ್ತಪ್ಪವಂದಿರ ಚೆಲ್ವರಾಯ ನಿಟ್ಟಿಸುತ ನಡೆದಂ ॥ ೧೯ ॥

ಉಗುರು ತುಪ್ಪುಳು ಹಜ್ಜೆಗಳ ಸಿಱುಂಬುಣಿಯ ಹು
ತ್ತುಗಳ ನೋಡುತ ಸನ್ನೆಗೆಯ್ವುತ್ತ ಹರೆದು ನಡೆ
ಹೊಗೆಯಿಕ್ಕಿ ಜೇನೆಡೆಗೆ ಸರುಹಕಟ್ಟಿಲುಹನಾಲಿಸು ಕುತ್ತುಱಂ ಸೋದಿಸು ।
ಬಿಗಿದ ಹಾಸಂ ತೆಗೆದು ಕುನ್ನಿಗಳ ಬಿಡು ಮೆಳೆಯ
ಪೊಗಲೀಯದೆಕ್ಕಲಂಗಳನಿಱಿಯೆನಿಪ್ಪ ಬೊ
ಬ್ಬೆಗಳಿಂದೆ ಬೇಂಟೆಯಾಡುತ್ತಿರ್ದುದಾ ಶಬರರೋಳಿ ಮಿಗಮಿಳ್ತುದಾಳಿ ॥ ೨೦ ॥

ಸಿಸುವಡೆಯದೊಂದು ಹರಿಣಂ ಪಿರಿದು ಕಾಲಮಿ
ರ್ದೊಸೆದೊರ್ವೆ ಮೋಹದಂಗನೆಗೆ ಗರ್ಭಮದಾಗಿ
ಬೆಸಲಾದ ಸಮಯದೊಳಗೊರ್ವ ಶಬರಂ ಕಂಡುಯೆಸಲಳಿವವೆಂದೇಣನು ।
ಅಸುವನೊಪ್ಪಿಸಲಡ್ಡಬಂದದಂ ನೋಡಿ ಸೈ
ರಿಸದೆ ಮಱಿಯಂ ಬಿಟ್ಟು ಕಾಳ್ಕಿಚ್ಚಿನೊಳ್ ಬಿಳ್ದ
ದೆಸಕದಿಂ ಹರಿಣಿ ತಾನಳಿದುದೆನೆ ಪತಿಯುಳಿವಿಗುಳಿವ ಸತಿಯಸತಿಯಲ್ತೆ ॥ ೨೧ ॥

ನೋಡುತಿಂತಪ್ಪ ಬೇಂಟೆಗಳನಾ ಮಾರ್ಗದೊಳು
ರೂಡಿಸಿದ ದೇಶದೇಶಂಗಳಂ ಕಳಿವುತ್ತ
ನಾಡೆ ದಿವ್ಯಕ್ಷೇತ್ರಮಂ ದಿವ್ಯಲಿಂಗಂಗಳಂ ಕಂಡು ಪೂಜೆಗಳನು ।
ಮಾಡುತಲ್ಲಲ್ಲಿಯಾ ಸದ್ಭಕ್ತನಿಕರದೊಡ
ಗೂಡಿ ತಿರುವಾರೂರ ಹೊಱವನದ ಬಳಿಯಲ್ಲಿ
ಬೀಡ ಬಿಟ್ಟಂ ಚೇರಮಕ್ಷೋಣಿಪತಿ ಲಸನ್ಮತಿ ಮಹಾಧೃತಿಯುನ್ನತಿ ॥ ೨೨ ॥

ಧರೆ ಬಿರಿಯಲಳ್ಳಿಱಿವನಂತ ನಿಸ್ಸಾಳದ
ಬ್ಬರವನಾಲಿಸಿ ಸೌಂದರಾಧಿಪನಿದೇನೆಂದು
ಪರಿಕಿಸುವ ಮಾತ್ರಕ್ಕೆ ಮುಂದೆ ಬಂದೀಶಭಕ್ತರು ನಮಿಸಿ ಕಯ್ಯ ಮುಗಿದು ।
ಪರಶಿವಕುಮಾರ ಚಿತ್ತೈಸು ಕೇರಳನರೇ
ಶ್ವರ ಚೇರಮಾಹ್ವಯಂ ಭಕ್ತಿಯಿಂದಂ ನಿಮ್ಮ
ದರುಶನಾರ್ಥಂ ಬಂದನೆನಲದಂ ಕೇಳ್ದನಂತಾಗ ಹರಿಸವನೆ ತಾಳ್ದ ॥ ೨೩ ॥

ಅಷ್ಟ ಶೋಭನದಿಂದೆ ಪಟ್ಟಣವನತಿಶಯದ
ತುಷ್ಟತ್ವದಿಂದೆ ಸಿಂಗರಿಸೆಂದು ನಿರವಿಸುತೆ
ಶಿಷ್ಟ ತುಂಬುರನೊಡರಿಚುವ ವೈಭವದೆ ಕುಱುಂಬರು ಮುಂದೆ ಗುಡಿಯನೆತ್ತೆ ।
ದುಷ್ಟ ಪಾವನಮೂರ್ತಿ ನಂಬಿಯೆಯ್ತರೆ ಕಾಣು
ತ್ತೈಷ್ಟಱೊಳಗಿದಿರೆದ್ದು ಚೇರಮಮಹೀಶ್ವರಂ
ಸಾಷ್ಟಾಂಗದಂಡಪ್ರಣಾಮದಿಂ ನಮಿಸೆಯುಜ್ಜುಗಿಸುತಿಹ ಕಾಲದಲ್ಲಿ ॥ ೨೪ ॥

ಕಂಡು ನಂಬ್ಯಣ್ಣನಂತಾಗ ಕೇರಳಮಹೀ
ಮಂಡಲಾಧೀಶನಂ ಪಿಡಿದೆತ್ತಿ ತಕ್ಕೈಸಿ
ಕೊಂಡು ಮತ್ತಮುರ್ದಪ್ಪಿ ಬಿಗಿದಪ್ಪಿಯೊಂದು ಪಟ್ಟಗಜದ ಮಸ್ತಕದೊಳು।
ಮಂಡನದ ಸಿಂಹಾಸನದೊಳಿರ್ವರಳವಟ್ಟ
ದಂಡನಾಯಕ ಮಕುಟವರ್ಧನರ ಮನ್ನೆಯರ
ತಂಡವೋಲೈಸೆ ಪುರಮಂ ಪೊಕ್ಕು ಬಂದರಾನಂದಮಯ ವಿಭವದಿಂದ ॥ ೨೫ ॥

ಅರಮನೆಯ ಬಾಗಿಲೊಳು ಶುಭಮಸ್ತು ಜಯಜೀಯ
ಹರಕುಮಾರಕ ಸೌಂದರಾಧೀಶ ಕೇರಳೇ
ಶ್ವರ ಭಾಪು ಸರ್ವಾವಧಾನಮೆನೆ ಗಜಮಸ್ತಕದಿನಿಳಿದು ಸಂತೋಷದಿ।
ಶರಣರೊಡವೆರಸಿ ಬಂದೊಳಪೊಕ್ಕು ಪಾದಮಂ
ತರುಣಿಯರು ತೊಳೆಯೆ ಪೀಠಂಗಳೊಳಗಿರ್ದು ಶಂ
ಕರನ ಪೂಜೆಯನೆಸಗಿದಲ್ಲಿ ಗಡಣಿಸಿದಳಾ ಪರವೆ ದಿವ್ಯಾನ್ನಂಗಳ ॥ ೨೬ ॥

ತದ್ವೃಕ್ಷಕುಲ ಮಹಾತ್ವಗ್ಭಸ್ಮ ನಿಕರದಿಂ
ದುದ್ವರ್ತನಂಮಾಡಿದಾಮ್ಲ ಮಧುರಂಗಳಿಂ
ಸದ್ವಿಚಾರದ ತುಱುವೆ ತವುಡು ಸುಣ್ಣಂಗಳಿಂ ಕ್ಷೀರ ನಿರ್ಗುಂಡಿ ಮೋಚ।
ದುದ್ವೃತ್ತ ಪಾಕದಿಂ ಪನಸಾಮ್ರ ಶರ್ಕರೆ ಲ
ಸದ್ವಿಮಿಶ್ರಾಗ್ರ ಗೋಧೂಮ ತಿಲಮಾಷ ಸಂ
ಪದ್ವಿಮಲ ಪಕ್ವಾನ್ನಮಂ ವ್ಯಂಜನಂಗಳಂ ಪರವೆಯರು ಗಡಣಿಸಿದರು ॥ ೨೭ ॥

ಕ್ಷೀರ ಗಾರಿಗೆಯಮೃತಫಲ ಕುರ್ಕುಱಿಒಟ್ಟ ಕ
ರ್ಜೂರ ವಡೆಗಡುಬು ರಸವೊಸರ್ವ ಸಜ್ಜಿಗೆಯೆಣ್ಣೆ
ವೂರಿಗೆ ಸುಫೇಣಿ ಮುಸುಕೊಡೆ ಬೆಣ್ಣೆದಱಿಗು ಹಾಲುಂಡೆ ಸಕ್ಕರೆ ಮಂಡಗೆ।
ಸಾರವಹ ಜೇನಕೊಡವತಿರಸಂ ಸುಖಿಯಪ್ಪ
ವೋರಣದ ಮುರಿಯಂಗರೋಳಿಗೆಯೆನಿಪ್ಪವಂ
ನಾರಿಯರ ಸೀಮಂತಮಣಿ ಪರವೆ ಸತಿಯಾದ ಪರವೆ ಗಡಣಿಸಿದಳಾಗ ॥ ೨೮ ॥

ಎಡೆಮಾಡೆ ಲಿಂಗಪ್ರಸಾದಮಂ ನಾವು ನೀ
ವೊಡನೆಯಾರೋಗಣೆಯ ಮಾಡಬೇಕೆನೆ ನಂಬಿ
ಯಡಿಗೆ ಬಿನ್ನವಿಸಿದಂ ಚೇರಮಂ ನಿಮ್ಮೊಳಗೆ ನಾಂ ಮಧುರಾನ್ನಮಂ।
ಸಡಗರದೊಳುಣಲಿಲ್ಲವುದಕ ಮಿಶ್ರಾನ್ನಮಂ
ಮೃಡಗಿತ್ತು ಕೊಂಬುದೇ ವ್ರತವಾಗಿ ತೊಟ್ಟೀಗ
ನಡೆಸುತಿರ್ದಪ್ಪೆನೆನಲೇಕೆಂದು ಸೌಂದರಂ ಕೇಳೆ ನುಡಿದಂ ಕೇರಳಂ ॥ ೨೯ ॥

ದೂಷ್ಯಮಲ್ಲೆನ್ನೀ ವ್ರತೋದ್ಯಾಪನಂ ಮಹಾ
ಭಾಷ್ಯಾದಿಗಳನು ವರರುಚಿ ಮುಖ್ಯರಿಗೆ ಪೇಳೆ
ಶಿಷ್ಯರಾಗಿರ್ದ ಪಲಬರು ತೆರೆಯ ತೆಗೆಯೆ ವಿಷದಿಂದುಳಿದು ಪೋಗಿಯವರು ।
[1]ಮು[1]ಷ್ಯಂಗರಾಗೆ ಬಂದಾ ಪತಂಜಲಿಗೂಡಿ
ರುಷ್ಯಗ್ರಗಣ್ಯನಾ ವ್ಯಾಘ್ರಪಾದಂ ನುತಿಸೆ
ತೋಷ್ಯನಾಗುತ್ತ ಸರ್ವೇಶ್ವರಂ ನಾಟ್ಯರೂಪಂ ತೋಱಲುಜ್ಜುಗಿಸಿದಂ || ೩೦ ||

ಪೊನ್ನ ತಗಡುಪನಿಷತ್ತುಗಳಂಕಗೃಹದ ಸೈ
ಪುನ್ನತ ಸ್ಥಲದಲ್ಲಿ ನಟಿಸೆ ಶಿವನಂತದೇ
ಪೊನ್ನಾಂಬಲಾಖ್ಯವಾಯ್ತೆನಗೆ ತೆರೆಯೆಡೆಯಲ್ಲಿ ಕುಣಿದು ರವಮಂ ಕೇಳಿಪಂ।
ಇನ್ನಲ್ಲಿಗೆಯ್ದಿಯಡಿಗಂಡಲ್ಲದಿವು ಸಲ್ಲ
ವೆನ್ನಲ್ಲಿನಿತ್ತೈಸೆ ಬಲುಕಜ್ಜವೆಂದಿರ್ದೆನ್ನೈ
ಮುನ್ನ ಕುಣಿದೀಶನಂ ನಿನ್ನ ಮುಂದೆಯು ಕುಣಿಸುವೆಂ ನೋಡಿಯುಂಬುದೆಂದಂ || ೩೧ ||

ಆವೇಳೆಯಗಲ ಬಾಸಣಿಸಿ ಪೊಂದಾಳಮಂ
ಶ್ರೀವಿಭವದಿಂ ಕೊಂಡು ಸೌಂದರಂ ನುಡಿದನಘ
ದಾವ ಚೇರಮರಾಯನಿದಿರಲ್ಲಿ ಕುಣಿಯೆಂದು ಪಾಡುತಿರೆ ಸುಮ್ಮನಿರ್ದ ।
ಭಾವಜಾಂತಕನ ಮೂದಲಿಸಿ ನರ್ತಿಸೆಯದಂ
ದೇವ ಸಾಸಿರವೇಕೆ ಪತ್ರಮಂ ತಾರೆನಲು
ನಾವೀಗಲಾಡೆವೆಂದೆವೆ ನಂಬಿಯೆಂದು ನಾಟ್ಯಕ್ಕೆ ನಿಂದಂ ಶಂಕರಂ || ೩೨ ||

ಅಂಬಿಕಾಪತಿ ನೃತ್ಯಕಂ ನಿಲಲುಮಾಮಹೇ
ಶಂಬೊಲೆಸೆವೆರಡು ತಾಳಂಗೊಂಡು ಚಚ್ಚಪುಟ
ವಿಂಬಿನಿಂ ಚಾಚಪುಟ ಷಟ್ಪಿಕಾಪುತ್ರವುದ್ಘಟನ ಕಂದರ್ಪಲೀಲೆ ।
ಪೊಂಬಡೆ ತುರಂಗ ವಿಕ್ರಮಸಿಂಹ ಸುಗುರುಲಘು
ಮುಂಬಿನೊಳ್ ಪ್ಲುತದಶಪ್ರಾಣವಱದೊತ್ತೆ ಸವಿ
ತುಂಬಿ ತುಳ್ಕಾಡುತಿರೆ ನಂಬಿಯಿದಿರೊಳಗಭವನಿಂಬಿನಿಂ ನೆಱೆ ನಟಿಸಿದಂ || ೩೩ ||

ಪದಗತಿಯೊಳನಿಸೋರೆಯೋಗದಾಳಾಪದೊಳ್
ಕದುಬದೆ ಕಳಾಸದೊಳ್ ಕೈಗೆಡದೆ ಕಾಲದೊಳ್
ತುದಿಮೊದಲನಱದು ತೊಟ್ಟನೆ ನಿಲಿಸಿ ತೊಡಗಿದೊಡೆ ಬಿಡದೊತ್ತಿ ದಶಜೀವಮಂ ।
ಮುದದಿ ಕಾಣಿಸಿ ಶಬ್ದದೊದವು ನಾಲಗೆದುದಿಯೊ
ಳುದುರುವಂತುಗ್ಘಡಿಸಿ ಠಣಠಣಠಣತ್ಕಾರ
ಮೊದಗುತಿರಲೀಶನಿದಿರೊಳಗಜಂ ತಾಳಮಂ ಬಾಜಿಸಿದನತಿ ಸೊಗಸಿನಿಂ || ೩೪ ||*

---

[1] ದು (ಕ). * 'ಗ' ಪ್ರತಿಯಲ್ಲಿ ಈ ಪದ್ಯವಿಲ್ಲ.

ಮಣಿದೆತ್ತಿ ನೋಡಿ ಬಾರಿಯ ಕಣ್ಣನೆಡಕೆ ಬೋ
ಹಣದ ಹದನಱಿದಿಕ್ಕಿ ನಿಗಮುವೇ ತಾನೆಂದು
ಗುಣಿಪವೊಲ್ ಚಾರಿಭೇದಂದೋಱಿಯನುಬೊಟ್ಟು ಮೋಹರಂಗಳ ಕಾಣಿಸಿ ।
ಎಣಿಪ ಪಂಚಾಕ್ಷರಿಯು ಮಾಳ್ಕೆಯಿಂ ತದ್ಧಿತೋ
ರಿಣವೆಂಬ ಕೂಱಿಂದೆ ನಂದಿ ಮದ್ದಳೆಯು ದಾಂ
ಧಣವೆಂದು ಶಬ್ದಮಂ ಕೈದೋಱಿ ಕಾಳಾಸಕೆಡಬಲಕೆ ಕೈಯಿಟ್ಟನು ॥ ೩೫ ॥

ಲಾಗು ಕೇಳ್ವರ ಹೃದಯದಾಗು ನೇಮಂ ಭರತ
ದಾಗಮಂ ಬೊಟ್ಟು ಮನವಾಗಲೊಸರ್ವಿನಿದು ತಾ
ನಾಗೆ ಮುಱುಕದ ಪೆಂಪು ಮೇಗೊಗ್ಗೆಯೆ ಕತ್ತರಂ ಸಾಗುತಿರೆ ಪೊಱಕೈಯೊಳು ।
ಚಾಗು ಮಝು ಭಾಪು ಸರಿಯಾಗುವರ ಕಾಣೆನೆನು
ತಾಗ ಕೀರ್ತಿಸಿ ಭಟ್ಟಮಾಗಧರು ನಂದಿ ಕಯಿ
ವೇಗದಿಂ ಮದ್ದಳೆಯು ತೂಗಿ ತಧ್ಧಿತ್ತೆಂದು ರಾಗದಿಂ ಬಾಜಿಸಿದನು ॥ ೩೬ ॥*

ಓವಿ ತುಂಬುರನಾರದರು ಪಂಚಮುಸ್ವರಂ
ತೀವಿ ಝಂಮ್ಮೈಯಲ್ಲಿ ನಾಭಿ ಹೃತ್ಕರದೆಡೆಯೊ
ಳಾವೋಸರಂ ಪ್ರೈಸರಂಬೊಕ್ಕೊಡಂ ತಾಳಹೀನಮಂ ಬರಲೀಯದೆ ।
ದೇಪನಾಲಿಸೆ ಗೌಳಗಾಂಧಾರ ರೀತಿ ಸಂ
ಭಾವಿಸಲ್ಕು ಶುದ್ಧಸಾಳಗ ಮಧುರ ಮಂದ್ರಮಂ
ಕೋವಿದರ್ಗರಸರಾಲಾಪಿಸೆ ಮಹಾತಾಂಡವಾಧೀಶನಾಡುತಿರ್ದಂ ॥ ೩೭ ॥

ಪಾಲ್ಗಡಲದುರ್ಕೆ ಮೇಲ್ವಾಯ್ದುಳಿವ [ತೆರೆಯು] ತಂ
ದಲ್ಗಿನಿದುಗಱೆವ ಮಾವಿನ ಪಕ್ವಫಲರಸವ
ನಲ್ಗೀರ ತನ್ನ ಚಂಚಿಂ ಕರ್ದುಂಕಲ್ ಸುರಿವ ಸಿಯ್ಯಮಳೆಯೋ ಚೆಲ್ವಿನ ।
ಪಾಲ್ಗೆನೆಯ ತಿರುಳೊಳನಿದಂ ಕವರ್ದುಕೊಂಬುತಿನಿ
ಗೋಲ್ಗಳಳವಟ್ಟು ಜೇನೆಯ್ ಝುಮ್ಮನೊಸರ್ದು ಪರಿ
ಕಾಲ್ಗೊಂಡುದೆಂಬಿನಂ ಪಾಡೆ ತುಂಬುರನಾರದರು ಶಿವಂ ನಟಿಸುತಿರ್ದಂ ॥ ೩೮ ॥*

ಮೊದಲ ಪುಷ್ಪಾಂಜಲಿಯ ಸಂಯುತಾ ಸಂಯುತವ
ನೊದವಿಸುತ ಷಣ್ಮಂಡಲಂಗೊಂಡುಪಾಂಗಾಂಗ
ವಿದಿತ ಸತ್ಕೃತ್ಯಂಗವೆನಿಸುವೞ ಮೇಳದಿಂ ಭುಲ್ಲವಿಸಿ ಸಾತ್ವಿಕಾದಿ ।
ತದಮಲಿನಭಾವಮಂ ಹರಿಹಿ ಲಕ್ಷಣಯುಕ್ತ
ಪದದೊಡನೆ ಪೇರಣಂ ಪೆಕ್ಕಣಂ ಗುಂಡಲಂ
ಸದಮಲದ ದಂಡಲಂ ಲಾಸ್ಯವೆಂದೆಂಬವಂ ತೋಱುತಿರ್ದಂ ಮಹೇಶಂ ॥ ೩೯ ॥

* 'ಗ' ಪ್ರತಿಯಲ್ಲಿ ೩೬, ೩೮ನೆಯ ಪದ್ಯಗಳಿಲ್ಲ.

ತಲೆನೀರ್ ತುಳುಂಕದರೆವೆುಯ್ಯಾಂತ ಕಾಂತೆ ಜಗು
ಳ್ದೊಲೆಯದಬ್ಜಾರ್ಯಮರಕಾಂತಿಯೊಂದೊಂದಱೊಳ್
ಕಲಸದವೊಲಾ ಲಾಸ್ಯ ಲಕ್ಷ್ಯ ಲಕ್ಷಣಕೆ ಗುರುಮೂರ್ತಿ ಜಯ ಜೀಯ ಭಾವು ।
ಭಲರೆಂದು ಚಂಡಕೀರ್ತಿಗಳು ಪೊಗಳಲು ನಾಟ್ಯ
ದೊಲವನುಮೆ ನಂದಿ ಹರಿಯುಜರಿಗುಪದೇಶಮುಂ
ನಲವಿನಿಂ ಪಾಲಿಸಿದನಮಿತಜನ ಭವವನಟ್ಟುವನ ನಾಟ್ಯಂ ಮೆಱೆದುದು ॥ ೪೦ ॥

ಕಾರಿಕಾಲಮ್ಮೆ ಗುಂಹಯ್ಯನಿದಿರೊಳು ಕುಣಿದ
ಮಾರಾರಿಯಡಿಯ ಕಂಡಾಯೆಂದು ನಂಬಿಯಾ
ಚೇರಮನ ಮುಂದಿಂದುಮೊದಲು ಕುಣಿಯೆಂದು ಹರಿದಪ್ಪಣೆಯನಿತ್ತು ಕೂಡೆ ।
ಆರೋಗಿಸುತ್ತ ಸಂಕಿಲೆ ಮಾಳ್ಪ ವಿನಯೋಪ
ಚಾರಮುಂ ಕೈಕೊಂಡು ಚೋಳಮಂಡಲದ ಲಿಂ
ಗಾರಾಧನೆಯ ಮಾಳ್ಪವೆಂದು ಸೌಂದರಕೇರಳಾಧಿಪರು ಹೊಱಮಂಟರು ॥ ೪೧ ॥

ನಂಬಿಯಣ್ಣಂ ಸಹಿತ ಚೇರಮ ಮಹೀಶ್ವರಂ
ತುಂಬುರ ವಿಚಾರಪರಮಂತ್ರಿ ಬಹುಸೇನಾ ಕ
ದಂಬದಿಂ ನಡೆತರುತ್ತಲ್ಲಲ್ಲಿ ದಿವ್ಯಶಿವಲಿಂಗಂಗಳಂ ನೋಡುತ ।
ಅಂಬಿಕಾಪತಿಯ ಕರುಣಂಗಳಂ ಪಡೆವುತ್ತ
ಮುಂಬಂದು ನೃತ್ಯಕಂ ತೋಱಿದೀಶ್ವರನ ಪೊ
ನ್ನಾಂಬಲಕ್ಕಾಗಿ ನಡೆತಂದರಾ ಭೂವರರು ಪರಮಸುಜ್ಞಾನಪರರು ॥ ೪೨ ॥

ಇದಿರುಗೊಳಲಖಿಲ ಮಾಹೇಶ್ವರರು ಸಂಭ್ರಮದಿ
ಪದಪಿನಿಂದಾ ಸುವರ್ಣಾಲಯಮನೆಯ್ದಿ ಸ
ಮ್ಮದದೊಳೀಶಾಂಘ್ರಿಯುಗಳಂಗಾಣುತಿರ್ದರೊಳು ಚೇರಮುಂ ತನಗೆ ಹಿಂದೆ ।
ಪದೆದಂದುಗೆಯ ದನಿಯ ಕೇಳಿಸಿದೆಯಾ ನಂಬಿ
ವಿದಿತದಿಂದೊರೆಯಲಕ್ಕಱೊಳು ನಟಿಸಿದ ಕೃಪಾ
ಸದನ ಶಂಕರ ಪಾಲಿಸೆಂದೆಱಗುತಲ್ಲಿಂದಲಾರೂರ್ಗೆ ನಡೆತಂದರು ॥ ೪೩ ॥

ಶ್ರೀಕರದ ಪರವೆಯರು ಸಂಕಿಲೆಯರೊಡರಿಚುವ
ನೇಕ ಸತ್ಕಾರಮುಂ ಕೈಕೊಂಡು ಗೋಧರಮ
ಹೀಕಾಂತನಿರ್ದು ಪಲಕೆಲವುದಿನವೂರ್ಗೆ ಪೋದಪೆನೆನಲ್ ನಂಬ್ಯಣ್ಣನು ।
ಪ್ರಾಕಟಾನರ್ಘ್ಯವಸ್ತುವನಿತ್ತು ಮನ್ನಿಸಲ್
ಬೇಕೆಂಬ ಸರ್ವಸ್ವಮುಂ ಶರಣತತಿಗೆಯು
ಸ್ತೋಕಭಕ್ತಿಯೊಳರ್ಪಿಸುತ್ತ ಹೊಱಡುವ ನೃಪನ ಕೂಡೆ ಬರುತಿರೆ ಸೌಂದರಂ ॥ ೪೪ ॥

ಅಂದ ಪಡೆದಭವನಣುಗಂ ನಂಬಿ ಚೇರಮರ
ಗೊಂದಣದಿ ವೈಭವದಿ ತೆರಳಿ ವಲ್ಮೀಕಪುರ
ದಿಂದಲುೞಿ ವೇದವನಮಂ ಪೊಕ್ಕು ವಿೞಿಗೆ ಸಿದ್ಧತೀರ್ಥವಂ ನೋಡಿ ಕೂಡೆ ।
ಅಂದು ಪಾಂಡ್ಯನ ದೇಶಕೆಯ್ದಿಯಲ್ಲಿರುತಮಿ
ಪ್ಪಿಂದುಧರ ಬಾಲವಕ್ತ್ರೇಶ್ವರನನತಿ ನಲ್ಮೆ
ಯಿಂದಲಜಹರಿಸುರೇಂದ್ರಾನತಪದಾಬ್ಜ ಸಲಹೆಂದು ನುತಿಸಿದನಳ್ಕಱಿಂ ॥ ೪೫ ॥

ಆವೇಳೆ ಚೇರಮ ಮಹೀಶಂಗೆ ಪೆಣ್ಗೊಟ್ಟ
ಮಾವನೆನಿಸುವ ವೀರಪಾಂಡ್ಯನೆಳ್ತಂದು ಶೋ
ಭಾವಹದಿ ಪುರವನಂತಾಗ ಸಿಂಗರಿಸಿ ಕೇರಳ ನಂಬಿಗಳ ಕಾಣುತ ।
ಭೂವರಂ ನಮಿಸಿ ಸಂಭ್ರಮದೊಳಿದಿರ್ಗೊಂಡಧಿಕ
ಸೇವೆಯಿಂ ಸತ್ಕರಿಸುತಿರೆ ಚೋಳನಲ್ಲಿಗೆ ಮ
ಹಾವಿಭವದಿಂ ಬಂದಿರ್ವರ್ಗೆ ವಂದಿಸೆ ಕಂಡು ಕೆಲವುದಿನವಿರ್ದು ಬಳಿಕ ॥ ೪೬ ॥

ನೋಡಿಯಾ ಪಾಂಡ್ಯ ದೇಶಸ್ಥಾನವೆಲ್ಲವಂ
ನಾಡೊಡೆಯರೊಡಗೂಡಿ ನಂಬಿ ಚೇರಮನೃಪರು
ನಾಡೆ ತೀರ್ಥದ ಪುಷ್ಪವನದಲ್ಲಿ ಕುಸುಮವೆತ್ತುವ ಸೇವಕರ್ಗಿಲ್ಲಿಯೆ ।
ನಾಡೆ ನೆಲೆಯಾಗಿರ್ಪವರು ನುಡಿದರಿಂತಿಲ್ಲಿ
ಗೂಢವೆನಿಸುವ ಲಿಂಗಮೂರ್ತಿಯುಂಟೆನಲಾಗಿ
ಪಾಡಿ ಪಡಿವೊನ್ನ ಪಡೆದಂ ಸೌಂದರಾಧಿಪಂ ನಮಿಸಿ ತಿರುಗಿದರನಿಬರು ॥ ೪೭ ॥

ಅಕ್ಕಱಿಂ ಚೇರಮಮಹೀಶ್ವರಂ ತನ್ನಯ ಪು
ರಕ್ಕಾಗಿ ಪೋಪಲ್ಲಿ ಪಾಂಡ್ಯಚೋಳರು ನಮಿಸೆ
ತಕ್ಕವಿಸಿಯವರವರ ದೇಶಕ್ಕೆ ಬೀಳ್ಕೊಟ್ಟು ಸೌಂದರೇಶ್ವರನು ತಾನುಂ ।
ಅಕ್ಕಜದ ಕಾವೇರಿಯಂ ನಾಡೆ ನೋಡಿಯದ
ಱಿಕ್ಕೆಲದ ವನವಾಟಿ ದಿವ್ಯತೀರ್ಥಂಗಳಂ
ಪೊಕ್ಕು ನುತಿಸುತ್ತವಾ ನದಿಯನೊಲವಿಂ ದಾಂಟಿದರು ಶಿಷ್ಟರತಿ ತುಷ್ಟರು ॥ ೪೮ ॥

ಹರುಷದಿಂದಿರ್ವರೆಯ್ತರುತಿರಲ್ ಬೇೞ್ಕೊಂದು
ಶರಧಿಯಂದದಿ ಪರಿವ ಪಂಚನದಿಯಧಿಪನಂ
ಸರವೆತ್ತಿ ನಂಬಿ ನುತಿಸಲ್ಕೆಯಾಂ ಬಹೆನೆ ಕಂದಾಯೆನುತೆ ತಾಂ ಮೆಲ್ಲನೆ ।
ಹರನುಸುರಲಲ್ಲಿಯಿಾರೇಳ್ಜಗಂ ಮುನ್ನ ಕಿ
ನ್ನರ ತಂದೆಗಂ ಲಿಂಗದಲ್ಲಿ ಬಾವೂರಬೊ
ಮ್ಮರಸಂಗೆ ಚೋಳದೊಳ್ ದನಿಗೆಯ್ದ ಮಾಳ್ಕೆಯಿಂ ದನಿಗೆಯ್ದನಾ ಶಂಕರಂ ॥ ೪೯ ॥

ಶಿವನ ದನಿಯಂ ಕೇಳಿ ಸಂತೋಷಿಸುತ್ತ ಭೂ
ಧವ ನಂಬಿಯಣ್ಣರಾ ಗಂಗೆಯೊಡನಿಲ್ಲಿ ಮಾ
ರ್ಗವನೀವುದೆಲೆ ತಾಯೆಯೆನಲು ಕಾವೇರಿಯಿರ್ಕಡೆಯಾಗೆಯೊರ್ದಿಕ್ಕಿಗೆ ।
ತವೆ ಜಲಾಚಲದಂತೆ ನೀರ್ ನಿಲಲ್ ಮಣಲೊಳಂ
ತಿವರು ನಡೆದೆಯ್ದಿ ಪಂಚನದೀಶನಂಘ್ರಿಯಂ
ಸ್ತವನವಂ ಮಾಡುತಿರೆ ಪೊಗಳಿದರು ಶಿವಭಕ್ತರಾನಂದಮುಣ್ಮುತಿರಲು ॥ ೫೦ ॥

ಅಂದು ಮುಸುಟಿಯ ಚೌಡರಾಯಂಗೆ ಶಿವಕೃಪೆಯ
ನಂದನನೆನಿಪ್ಪಾ ಪ್ರಸಾದಿ ರಾಮಯ್ಯಂಗೆ
ಯಿಂದುಧರಮೋಹಿ ಎನಿಸುವ ಗಜೇಶ್ವರ ಮಸಣಿದೇವಂಗೆ ಕೇಶಿರಾಜ ।
ತಂದೆಗೆಂತಂತಾಯ್ತು ಭಾಪುರೇ ಚೇರಮಾ
ಸೌಂದರಾಧೀಶಯೆಂದಿರ್ವರಂ ಪೊಗಳುತಿರೆ
ಕಂದರ್ಪಹರನ ಕೊಂಡಾಡಿ ಕಾರುಣ್ಯಮಂ ಪಡೆದರಾ ನಿಜನಿಷ್ಠರು ॥ ೫೧ ॥

ಎಳೆವೆಱೆಯ ತಳೆದನಂ ಬೀಳ್ಕೊಂಡು ಬಂದು ನಿ
ರ್ಮಳಮಪ್ಪ ಕಾವೇರಿ ತಾಯೆ ಜಗವೆಲ್ಲವಂ
ಮುಳುಗಿಸದೆ ತೇಂಕಾಡಿಸದೆ ಮೇರೆಯಂ ಮೀಱದೆಯ್ದಬೇಕೆಂದು ಪರಸಿ ।
ಬಳಿಕಲಲ್ಲಿಂದಿರ್ವರುಂ ಬಂದು ನಾಡೆ ಪೊ
ಕ್ಕುಳಿಯೂರೊಳವಿನಾಶಲಿಂಗಮಂ ಕಂಡಂಘ್ರಿ
ನಳಿನಕ್ಕೆ ನಮಿಸಿಯಾ ನಂಬಿ ಚೇರಮರಿರ್ಪ ಸಮಯದೊಳಗೇನೆಂಬೆನು ॥ ೫೨ ॥

ನಂಬಿ ನಂಬೀ ಮಡಿದೆಯಾಯೆನುತ್ತೊರ್ವಬಲೆ
ಪಂಬಲಿಸುತಿರೆ ಕರೆಸಿ ಕೇಳಲಂತಾ ನಂಬಿ
ಯೆಂಬವನ ಪೆಸರಿಡಲ್ ಮೊಸಳೆ ನುಂಗಿತ್ತೈದುವರುಷದೊಳಗೆಂದೊಡಾನೆ ।
ನಂಬಿಯೆಂದೀಶ್ವರನ ಪಾಡೆ ನಕ್ರವೆ ಬಂದು
ಮುಂಬಿನೊಳಗುಗಳಲೇಳ್ವರಿಸವಾಗಿರ್ಪ ಶಿಶು
ನಂಬಿಗಂ ಮುಂಜಿಗಟ್ಟಿಸಿದನಾ ನಂಬ್ಯಣ್ಣನತಿಮಹಿಮೆಯಗ್ಗಳಿಸಲು ॥ ೫೩ ॥

ಇವು ಮೊದಲನೇಕ ಸುಕ್ಷೇತ್ರಂಗಳಂ ನೋಡಿ
ಯವಿನಾಶಲಿಂಗಂಗೆ ನಮಿಸಿ ಬೀಳ್ಕೊಂಡು ಭೂ
ಧವ ಚೇರಮಂ ನಂಬಿಯಣ್ಣನೊಳು ಪೋದಪ್ಪೆನೆಂದು ಬಿನ್ನವಿಸಲಾಗ ।
ಅವರಿರ್ವರಿದೆಯಲ್ಲಿ ನೇಹವಗ್ಗಳಿಸಿಯಗ
ಲುವದಱಿಂದೀಕ್ಷಣಂ ಕೂಡೆ ಕೈಲಾಸಕೆ
ಯ್ದುವದೆ ಲೇಸೆಂದು ಮಱುಗಿದರೆನಲು ಶಿವಾಶಿವಾ ಕೂಟದತಿಶಯವೆಂತುಟೊ ॥ ೫೪ ॥

ಚೇರಮಂ ನಂಬ್ಯಣ್ಣಗೆಱಗಿ ಬಿನ್ನೈಸಿದಂ
ಕಾರುಣ್ಯನಿಧಿ ನೀವು ಮನ್ನಗರಿಗೆಯ್ದಿಯುಂ
ತೋರಂತೆಯೆಮ್ಮೆಲ್ಲರಂ ನೋಡಿಯುಳ್ಳಱಿಂದಾ ಮಹಾಕೈಲಾಸಕೆ ।
ಓರಂತೆ ಪೋಪಲ್ಲಿಯೆನಗುಸುರ್ವುದೆಂದೆನು
ತ್ತಾ ರಾಯನಾಡೆ ನಂಬುಗೆಯಿತ್ತು ತನ್ನ ತಿರು
ವಾರೂರ್ಗೆ ಪೋಗೆ ಗೋಧರನಿತ್ತ ತತ್ಪುರಂಬೊಕ್ಕು ಸೊಗಮಿರ್ದನಂದು ॥ ೫೫ ॥

ನಿನ್ನ ತಲೆ ಭೂರಿನದಿಗಳಿಗೆ ತಲೆಗಾವೇರಿ
ನಿನ್ನ ಕರವಜಶಿರಂ ದಿಟದೆಯೋದುವ ಮಠಂ
ನಿನ್ನ ಮಿಸುದೇರಣಂಬಡೆದ ಸುರಗಾಸ್ಯಾಬ್ಜಮಂ ಕೊರೆದು ಸುರಿದಾ ಕಣಂ (?) ।
ನಿನ್ನ ತೊಡೆಯುಗಜೆ ಮಂಡಿಸುವ ಮಣಿಪೀಠದೆಡೆ
ನಿನ್ನ ಪದವಧಿಕ ಮುದದಿಂ ನೋಡೆ ಕೂಡೆ ಹರಿ
ತನ್ನಕ್ಷಿಕಮಲಮುಮನಿರಿಸಿ ರಾಜಿಪ ಸರಸಿಯಾಯ್ತುಲಾ ಭೋಗಮಲ್ಲ ॥ ೫೬ ॥*

ಇದು ಸಕಲ ಭಕ್ತಪದಪದ್ಮ ಮಧುಕರಪುಣ್ಯ
ಸದನ ಗುಬ್ಬಿಯ ಮಲ್ಲಣಾರ್ಯರ ಕೃಪಾಪಾತ್ರ
ಮುದಿತ ನವರಸ ಭಾವ ಲಕ್ಷಣಾಲಂಕಾರ ನಿಪುಣನೆಂದೆನಿಸಿ ಮೆಱೆವ ।
ಚದುರ ಚೇರಮನೊರೆದ ಚೇರಮಚರಿತ್ರಮಂ
ಪದಪಿಂದ ಬರೆದೋದಿ ಕೇಳಿ ವಿಸ್ತರಿಸುವ
ರ್ಗೊದಗಿಪ್ಪುದಾಯುರಾರೋಗ್ಯ ಸಂಪದ ಸರ್ವಸಿದ್ಧಿ ಸತ್ಯಂ ತಥ್ಯವು ॥ ೫೭ ॥

* 'ಗ' ಪ್ರತಿಯಲ್ಲಿ ಈ ಪದ್ಯವಿಲ್ಲ.

# ಹನ್ನೊಂದನೆಯ ಸಂಧಿ

**ಸೂಚನೆ :**

ನಂಬಿ ಕೈಲಾಸಕ್ಕೆ ಪೋಗುತಿರಲಂತವನ
ಬೆಂಬಳಿಯೊಳಿರ್ದು ಧಾಳಿಯನಿಟ್ಟವಂಗೂಡಿ
ಯಂಬಿಕಾಪತಿಯ ಕಂಡಲ್ಲಿ ಕಾವ್ಯವನೋದಿಸುತ್ತೊಪ್ಪಿದಂ ಚೇರಮಂ ||

ಸೊನ್ನೆದಾವರೆಗೆಳೆಯ ಮುನ್ನೀರಣುಗರೆಸೆವ
ರನ್ನವಸುಱುಗನಾ ತಿಂಗಳ ಮಗಂ ಮಿಸುಪ
ಜೊನ್ನಗೂಳಯುವರೋಜನಾ ಕಬ್ಬಿಗಂ ಮೆಲ್ನಡೆಯವಂ ನಾಡೆ ಬಾಂಬಾಸಿಗಂ |
ಪನ್ನತಿಕೆವೆತ್ತ ಪಳಯಿಗೆವೆಸರ ನಾಡಿಯಾ
ದುನ್ನತದ ಗರಗಳೊಂಬತ್ತು ಸೇವಿಸೆ ಮೆಱೆವ
ಚೆನ್ನಿಗರ ದೇವನೊಲಿದೆನ್ನನುಱೆ ಕಾವ ಮಜ್ಜೀವ ಜಯ ಭೋಗವಲ್ಲ || ೧ ||*

ನಿಯತದಿಂದಿಂತು ಚೇರಮಭೂವರಂ ಮಹೋ
ದಯ ಪಟ್ಟಣದೊಳೀಶನಂ ಪ್ರಭಾತದೊಳು ತಾಂ
ನಿಯಮದಿಂದರ್ಚಿಸುತೆ ಮುನ್ನಲಾ ತೆರೆಯ ಮಱೆಯೊಳು ಕುಣಿಸುವಂತಲ್ಲದೆ |
ನಯದಿಂದೆ ನಂಬಿಯಾಣತಿಯೊಳಂತಾ ಜಗ
ನ್ಮಯನ ಕುಣಿಕುಣಿದಾಡಿಸುತ್ತೆ ಹರುಷಿಸಿ ಪದ
ದ್ವಯಮನಳ್ತಿಯೊಳೆ ನೋಡುತ್ತೆ ಱಗುತಾನಂದರಸವಾರ್ಧಿಯೊಳಗಾಳ್ದನು || ೨ ||

ಅವಿರಳಾತ್ಮಕ ಚೇರಮಕ್ಷಿತೀಶ್ವರನಿಂತು
ಶಿವನ ನಿಚ್ಚಂ ಹಾಡಿ ಕುಣಿಸುತ್ತೆ ನಲ್ಮೆಯಿಂ
ದವನಿಪತಿ ನಂಬಿಯಣ್ಣನ ಬರವನೆಳಸುತ್ತೆ ಧರೆಯ ಧರ್ಮದೆ ಸಲಹುತೆ |
ಸವೆಯದಾನಂದದಿಂ ತಿರುವಂಜಕಳದ ಶಂ
ಭುವನರ್ಚಿಸುತೆ ಸುಖಂದಳೆವುತ್ತಲನುದಿನಂ
ನವರಸಂದೊರೆದೊಗುವ ತಿರುವಳಂಪೊಱವೆನಿಪ ಕೃತಿವೇಳುತೊಪ್ಪಿರ್ದನು || ೩ ||

ಆ ಮಹೋದಯ ಪಟ್ಟಣದೊಳಿಂತು ಚೇರಮಂ
ಶ್ರೀಮಹೀಪತಿಯತ್ತಲಿರಲಿತ್ತ ಸೌಂದರಂ
ಪ್ರೇಮದಿಂ ವಾಲ್ಮೀಕಿನಾಥನಲ್ಲಿಗೆ ಬಂದು ತಿರುಪಾಟ ಪಾಡುವಲ್ಲಿ |
ಕಾಮವಿರಹಿತ ನಿರ್ವಿಷಯ ಸೂಕ್ತಿಯಂ ಕೇಳಿ
ರಾಮಣೀಯಕ ವಚನದಿಂದ ನಿನ್ನಿಷ್ಟವೇ
ನೈ ಮಗನೆಯೆನೆ ಜೀಯ ಬಿನ್ನಪಂ ಸಾಕಿನ್ನು ಭೂಮಿಯ ಸುಖಂಗಳಿಂದಂ || ೪ ||

---

* 'ಗ' ಪ್ರತಿಯಲ್ಲಿ ಈ ಪದ್ಯವಿಲ್ಲ.

ಮಾರಾರಿಯಿಂತೆಂದನೆಲೆ ನಂಬಿ ಕೇಳಯ್ಯ
ಚೇರಮನ ಪುರದ ತಿರುವಂಜಕಳದೇವನಾ
ಗಾರದಲ್ಲಿಗೆ ಸೀತೆ ಭವನು ರಾಯಃಸಮುದ್ರೆಯಂ ಕಳುಪಿದಪೆವೆಮ್ಮಯ |
ಶ್ರೀರಜತ ಪರ್ವತಕೆ ಬರ್ಪುದೆಂದೊರೆಯಲಾ
ರೂರ ಪೊಱಮಟ್ಟು ಪರವೆಯರ ಸಂಕಿಲೆಯರ ಮ
ನೋರಮ್ಯವಾದ ಪಲ್ಲಕ್ಕಿಯಿಂ ಚತುರಂಗಸೇನೆಯಿಂ ನಡೆತಂದನು ॥ ೫ ॥

ತಂಬಿರಾಂದೋಳನೆಂದೆಂಬ ಕಹಳಾರವಂ
ತುಂಬೆ ವೈಭವದಿಂದೆ ಮುಂದೆ ಪೆರುಮಳಲಿಯ ಕು
ಱುಂಬರ್ ಗುಡಿಯನೆತ್ತಿ ಭೇರಿ ನಿಸ್ಸಾಹಣಂ ಕರಡೆ ಕಂಸಾಳಂಗಳು |
ತಂಬಟದ ಧ್ವನಿಯಿಂದೆ ಪಾಠಕರ ಸವಿನುಡಿಗ
ಳಿಂ ಬರುತ್ತಿರ್ದನಾ ಚೇರಮನ ಪುರದತ್ತ
ನಂಬಿಯಣ್ಣಂ ದೂಷಕಾಳಿ ಕೆಟ್ಟೋಡೆ ಸಂತಸ ಮೂಡೆ ಕೂಡೆ ಕೂಡೆ ॥ ೬ ॥

ಬರುತಿರಲರಣ್ಯದೊಳು ಮುನ್ನ ಪಾರ್ಥಂಗೆ ಶಂ
ಕರನೆಂತು ಬಂದನಾ ತೆಱದಿಂದೆ ಬೇಡವಡೆ
ವೆರಸಿ ನಂಬಿಯ ಸೇನೆಯಂ ಮುತ್ತಿ ಚಪ್ಪರಿಸಿ ಬಯಲಾಗುತಿರಲನಿಬರು |
ಇರದೆ ತುಂಬುರ ಸಹಿತ ಶಿವಲಿಂಗವಿರ್ಪ ತಿರು
ಮುರಿಗಾಡಿಯಂ ಕಂಡು ಪೀಠಸಂಧಿಯೊಳೆಲ್ಲ
ಪರಿಜನವನೀಶನೀಯಲ್ ಪಡೆದು ವಿಭವದಿಂ ಕೊಂಕದೇಶಕ್ಕೆ ನಡೆದಂ ॥ ೭ ॥

ಸುಳಿದು ನಂಬ್ಯಣ್ಣನಾ ಕೊಂಕದೇಶದೊಳು ತಾ
ಕಳಿದು ಮರ್ತ್ಯದ ಸಕಲ ಭೋಗಮಂ ಸಂಸೃತಿಗೆ
ಮುಳಿದು ಬರುತಲ್ಲಲ್ಲಿಯುಳಿದುಮೇಶಸ್ಥಾನದೊಳಗೆ ಪಡಿವೊನ್ನ ಕೊಂಡು |
ಬಳೆದು ಸದ್ಭಕ್ತಿಯೊಳು ಬರ್ಪ ವಾರ್ತೆಗೆ ಸುಖಂ
ದಳೆದು ಚೇರಮನಲ್ಲಿಗಿದಿರ್ವಂದು ಕಾಣುತ್ತ
ಲಿಳಿದು ಗಜಮಸ್ತಕವನಾನಂದದಿಂ ನಾಡೆ ತಿಳಿದು ಹರುಷಿಸಿದನಾಗ ॥ ೮ ॥

ಚಂದಿರನ ಜೊನ್ನಮಂ ಕಂಡಾ ಚಕೋರಂಗ
ಳಂದದಿಂದಂ ತಳರ್ದು ಮಿಳಿರ್ದುರ್ವಿ ಪರ್ವುತ್ತೆ
ಸಂದಣಿಪ ಪುಳಕೋದ್ಗಮಂಗಳಿಂ ಕಂಪನದಿನಶ್ರುಜಲಮುಣ್ಮೃತಾಗ |
ಸೌಂದರೇಶನ ಕಂಡು ಕೇರಳಾಧೀಶ್ವರಂ
ಬಂದು ಪಾದಾಕ್ರಾಂತನಾಗೆ ತಳ್ಕೈಸುತ್ತೆ
ಯಂದೊರ್ವರೊರ್ವರುನ್ನತದ ಪರವಶದ ಝೊಮ್ಮಿಂದೆ ಮೆಯ್‌ಮಱೆದಿರ್ದರು ॥ ೯ ॥

ಓರೊರ್ವರಾನಂದರಸದೊಳಾಳುತ್ತಿಳ್ದು
ಭೋರನೆಯ್ತರೆ ಮುಂದೆ ತದ್ದೇಶದೊಳಗೆ ಗುಡಿ
ತೋರಣಂಗಳ್ ಮೆಱೆಯಲಲ್ಲಲ್ಲಿ ನಾಡೆ ಪನ್ನೀರ ಚೆಲ್ವಬವಟಿಗೆಯಿಂ ।
ಓರಂತೆಯರಲ ಮಂಟಪದಿಂದೆ ಕೆಲವು ಬೀ
ಡಾರಂಗಳಿಂ ಸಿಂಗರಿಸಿದ ಪಟ್ಟಣವನಂ
ತೂರೂರ್ಗಳಾ ಬಟ್ಟೆ ಬಟ್ಟೆಯೊಳ್ ನೋಡಿ ಸಂತೋಷಿಸುತ ನಡೆತಂದನು ॥ ೧೦ ॥

ಕುಸುಮಕೋರಕಪಲ್ಲವಂ ಪರಳ್ಕಿಡಿದೋರೆ
ಮಿಸುಪ ಪಣ್ಣಿಡಿದಿರ್ದು ರಾಜಿಪಿವ್ಮಾವುಗಳ
ಮಿಸುನಿಯ ಕರಂಡದೊಳು ರಂಗುಮಾಣಿಕದುಂಬಿದೆಸಕಮಂ ನೆಱೆ ತಾಳಿದ ।
ರಸದಾಡಿಮಂಗಳಾ ಸುರರ ಸುಧೆಯಂ ಪೊನ್ನ
ಪೊಸಬಿಂದಿಗೆಯೊಳು ಸಂದಿಸಿದಂತೆ ಮೆಱೆದು ಚೆಲು
ವೆಸೆವ ಚೆಂದೆಂಗುಗಳ ಕುಜದ ತಣ್ಣೆಳಲೊಳಾ ವಸುಧೇಶರೆಳ್ತಂದರು ॥ ೧೧ ॥

ಚೇರಮನೃಪಾಲಕಂ ಸಹಿತಲಾ ಸೌಂದರರು
ಮಾರಕಂ ಬರ್ಪುದಂ ಕೇಳ್ದು ಸಂತೋಷಿಸುತ
ಪೌರಜನರಳ್ತಿಯಿಂ ಗುಡಿತೋರಣಂಗಟ್ಟಿ ನಗರಿಯಂ ಸಿಂಗರಿಸುತೆ ।
ಭೇರಿ ನಿಸ್ಸಾಳಹಣಂ ತಂಬಟಧ್ವನಿಗಳಿಂ
ಭೋರೆಂಬ ಕಹಳಾ ನಿನಾದಂಗಳಾದಿಯಾ
ದಾರುಭಟೆಯಿಂದಿದಿರ್ಗೊಂಬ ಸಂಭ್ರಮವನದನೇನೆಂದು ಬಣ್ಣಿಸುವೆನು ॥ ೧೨ ॥

ಕಳಸಕನ್ನಡಿಗಳಿಂ ಪಲ್ಲವದ ಸತ್ತಿಗೆಯು
ನಳವಡಲು ಢಾಳಯಿಪ ಚಾಮರ ನಿಕಾಯದಿಂ
ವಿಳಸದಿಂ ಗುಡಿಗಳಂ ರಸಪಾಳಿಗಳ ಪಿಡಿದು ಕುಣಿದಾಡುವವರ್ಗಳಿಂದೆ ।
ಕಳೆಯಿಂದಲಾಗಸವನಳ್ಳಿಱುವ ವೃಷಭನು
ಜ್ವಳದ ಹಳವಿಗೆಗಳಿಂ ಧೂಪದೂಮ್ರಂಗಳಿಂ
ದಿಳೆಗೆ ಪುಣ್ಯದ ಪುಂಜವೆನಿಸುವಾ ನಂಬಿ ಚೇರಮರನಂದಿದಿರ್ಗೊಂಡರು ॥ ೧೩ ॥

ಒಡನೊಡನುಘೇ ಚಾಂಗು ಬೊಲ್ಲೆಂಬ ರಭಸದಿಂ
ಕಡುಬೀರದಿಂ ಕುಲಿಲಿ ಕುಬಿಬೆಂಬ ವೀರರಿಂ
ಪೊಡವಿಯಿಬ್ಬಗಿಯಾಗಿ ಪೊಡೆವ ವಾದ್ಯಂಗಳಿಂದಭಿನೈಪ ನೃತ್ಯಂಗಳಿಂ ।
ಗಡಣದಿಂ ಚೆಲ್ಲುತಿಹ ಪುಷ್ಪಾಂಜಲಿಗಳಿಂದೆ
ಮಡದಿಯರ್ಗಳೆತ್ತುತಿಹ ರನ್ನದಾರತಿಗಳಿಂ
ನೃಡನ ಭಕ್ತರ್ಗಳಿದಿರ್ಗೊಳೆ ಸಕಲಸಂಭ್ರಮದಿ ಪಟ್ಟಣಂಬೊಕ್ಕರಂದು ॥ ೧೪ ॥

ಪಟ್ಟಣದೊಳತಿ ವಿಭವದಿಂ ಬರಲು ಪೌರಜನ
ವಿಟ್ಟಣಿಸಿ ನೋಡುತೀತನೆಯೆಮ್ಮ ಪಾಲಿಸುವ
ಕಟ್ಟರಸಿಗತಿಹಿತವನಾ ಮೃಡನ ಕಯ್ಯಿಂದೆ ಹಡಪಮಂ ಪಿಡಿಸುವಿವನ |
ಒಟ್ಟಜೆಯ ರೂಪು ಸುಕುಮಾರಿಕೆಯು ನಾವೆಲ್ಲ
ನಿಟ್ಟಿಸುತ್ತೀಗ ಕೃತಕೃತ್ಯರೆನುತಿರೆ ಮುಂದೆ
ಭಟ್ಟರುಗ್ಘಡಿಸೆ ಮಾಗಧರು ಕೀರ್ತಿಸೆ ಸೊಗಸುವಟ್ಟು ನಡೆತರುತಿರ್ದರು || ೧೫ ||

ಪೊಂಬೊಗರಿ ಮೊಲೆಯ ಚಂದಿರಮೊಗದ ಸತಿಯರುಗ
ಳಿಂಬುವಡೆದಿರ್ದುಪ್ಪರಿಗೆಯುಗ್ರದೊಳ್ ನಿಂದು
ತಾಂ ಬರುವ ಭೂಪಾಲರಂ ನೋಡುತಿರಲೊರ್ವ ಮುಗ್ಧೆವೆಳೆವೆಣ್ಣೊಳಾಗ |
ಅಂಬುಜದ ವನವಿದೆಲ್ಲಿಯುದೆನಲ್ಕಲ್ಲಲ್ಲಿ
ನಂಬಿ ಚೇರಮರು ಬರುತಿರಲಿದಿರ್ಗೊಳಲಿಟ್ಟ
ಚೆಂಬೊನ್ನ ಕಳಸಕನ್ನಡಿಯೆಂದವರ್ ನಗಿಸಿದರ್ ವಿದಗ್ಧೆಯರನಂದು || ೧೬ ||

ಚೇರಮ ಮಹೇಶ್ವರಂ ನಂಬಿಯಣ್ಣನನಿಂತು
ಸಾರಂಭದಿಂದಲೊಡಗೊಂಡುಬಂದುತ್ಸವದೊ
ಳಾ ರಾಜಮಂದಿರಂಬೊಗುವಲ್ಲಿ ಚೆಲ್ವಿನೆಳೆವೆಣ್ಮಣಿಗಳೊಳ್ಮಣಿಗಳ |
ಆರತಿಯನೆತ್ತುತಿರೆ ನವರತ್ನ ಸಿಂಹಾಸ
ನಾರೂಢನಾದ ಸೌಂದರನ ನಡೆನೋಡಿ ಮಿಗೆ
ಹಾರೈಸಿ ಸಂತಸಂಗೂಡಿ ಮನದೊಳ್ ಕುಳಿಕ್ಕೊರ್ಳೇಡಿದಂ ಕೇರಳೇಶಂ || ೧೭ ||

ಚೆಂಬೊನ್ನ ತಂಬುಗೆಯೊಳಾ ಸೌಂದರಾಂಗಿ ಕುಸು
ಮಾಂಬುವಂ ತಂದು ಪಿಡಿಯಲ್ ಕೇರಳೇಶನಾ
ನಂಬಿಯ ಪದಾಬ್ಜಮಂ ತೊಳೆಯಲೆಂದನುಗೆಯ್ಯೆ ಬೇಡ ಬೇಡೆಂದೆನಲ್ಕೆ |
ತಾಂ ಬೇಡಿಕೊಂಡು ವಂದಿಸಿ ಸೇವೆಗಳನೆ ಕೈ
ಕೊಂಬುದೆನುತಂ ಚರಣಮಂ ತೊಳೆದು ಸೌರಭಕ
ದಂಬ ಪುಷ್ಪದಿನರ್ಚಿಸುತ್ತ ಪಾದೋದಕವನಿಂಬಿನಿಂ ಸ್ವೀಕರಿಸಿದಂ || ೧೮ ||

ಸಲ್ಲೀಲೆಯಿಂ ಶಿವನ ಶರಣರೊಡವೆರಸಿ ತಾ
ವಲ್ಲಿ ಮನೆಯೊಕ್ಕು ಪಂಕ್ತಿಯೊಳು ಕುಳ್ಳಿರ್ದು ಭೂ
ವಲ್ಲಭಂ ಸಹಿತಲಮೃತಾನ್ನಮಂ ಸಹಭೋಜನಂ ಮಾಡಿ ನಾಡೆ ಕೂಡೆ |
ಪುಲ್ಲಶರವೈರಿಯ ಕಥಾಪ್ರಸಂಗಂಗಳಂ
ಮೆಲ್ಲನಿನಿದೀವ ತತ್ವಾರ್ಥಮಂ ಕೇಳುತಂ
ತೆಲ್ಲಾ ಸೊಗಂಗಳಿಂ ಕತಿಪಯದಿನಂಗಳಂ ಕಳಿವುತಿರಲೇನೆಂಬೆನು || ೧೯ ||

ಪ್ರಾಚೀನಬರ್ಹಿಯೈಶ್ವರ್ಯಕಂ ಮಿಗಿಲೆನಿಸು
ವಾ ಚೇರಮನ ರಾಣಿ ಸತ್ಕರಿಸುತಂ ಪರವೆ
ನಾಚಿ ಸಂಕಿಲೆಯಾದಿಯಾದ ವನಿತಾಕದಂಬಕ್ಕೆ ಸಂತಸಮನೆಸಗೆ |
ವೈಚಿತ್ರ್ಯದಾಲಯಮನಮೃತಾನ್ನ ಮುಖ್ಯಮುಮ
ನಾ ಚತುರ್ಬಲಕೆ ಕಲ್ಪಿಸಿ ನಂಬಿಯಣ್ಣನೊಡ
ನಾ ಚೇರಮಂ ಸಿಂಹಪೀಠದೊಳಗೆಸೆವೋಲಗವನಾರು ಬಣ್ಣಿಸುವರು || ೨೦ ||

ಕೋಲ್ವಿಡಿದು ಸಾಧನೆಯ ತೋಱುವಧಟರ್ಕಳಿಂ
ಪಾಲ್ಗೊಳೆಯ ತೆಱದಂತೆ ಪಾಡುತಿಹ ಗಾನರಿಂ
ಕೇಲ್ವಲಿದ ಕಂಕಣಂಗಳ ಝಣತ್ಕಾರದಿಂ ಚಾಮರಂಗಳ ಢಾಳಿಸಿ |
ಚೆಲ್ವಡೆದು ನಿಂದ ನೀಱೆಯರ ಸಂದಣಿಯಿಂದ
ರಲ್ವಚ್ಚಿಗಳ ಪರಳ್ಮಾಲೆಯ ಪೆಣ್ಮಣಿಗಳಿಂ
ಮೆಲ್ವಾತುಗಳ ಗಾಡಿಯಿಂ ರಾಜಿಪಾಸ್ಥಾನದೊಪ್ಪಮಂ ಪೊಗಳಲಳವೆ || ೨೧ ||

ನವರಸಾಂಕಿತಮಪ್ಪ ಕವಿಗಳನುಭವಿಗಳತಿ
ಸವಿಗಳಂ ಪಾಡುತಿಹ ಗಮಕಿಗಳ ಯಮಕಿಗಳ
ವಿವಿಧ ಸುವಿಚಾರಯುತ ವಾದಿಗಳ ಭೇದಿಗಳ ಧೀರರನುಪಮವೀರರ |
ಭುವನಕಪ್ರತಿಮರಹ ವಾಗ್ಮಿಗಳ ಯುಗ್ಮಿಗಳ
ತವೆ ವಿರಾಜಿಸುತಿರ್ಪ ನಟರುಗಳ ವಿಟರುಗಳ
ನಿವಹದೋಲಗವನಾ ನಂಬಿಯಣ್ಣಂಗೊಡರ್ಚುತ್ತಲಾ ಕೇರಳೇಶಂ || ೨೨ ||

ಊಡಿಸುತ ಷಡುರಸಾನ್ನವನಭವ ಭಕ್ತರ್ಗೆ
ಯಾಡಿಸುತೆ ನಾಟ್ಯಮಂ ರಸವೊಸರ್ವ ಗೀತಮಂ
ಪಾಡಿಸುತಲಾವಗಂ ಮಲ್ಲ ಕುಕ್ಕುಟ ಮಹಿಷ ಮೇಷಾದಿ ಯುದ್ಧಂಗಳ |
ಮಾಡಿಸುತ ವಿವಿಧ ವಾದ್ಯಂಗಳಯ್ತರೆ ಕೂಡೆ
ನೋಡಿಸುತೆ ದಿನದಿನಕೆ ಹರುಷಮಂ ಚಿತ್ತಕ್ಕೆ
ಮೂಡಿಸುತ ಚೇರಮಂ ನಂಬಿಯಿದಿರೊಳಗಿರಲದೊಂದುದಿನವೇ ಪೊಗಳ್ವೆನು || ೨೩ ||

ಮಾರಾರಿಯಣುಗ ನಂಬ್ಯಣ್ಣನೊಲ್ದೊಮ್ಮೆ ಸೊದೆ
ಪೂರೈಸಿದುಪ್ಪರಿಗೆಯಂ ನಲ್ಮೆಯಿಂದೇಱೆ
ಚೇರಮಂ ಕೂಡೆಯಡರ್ದಂ ಮುಕ್ತಿಸೋಪಾನಸಪ್ತಕವನಡರುವಂತೆ |
ತಾರಾದ್ರಿಗೀ ತೆಱದೆ ಸೌಂದರಂ ಪೋದಡಾ
ನೋರಂತೆ ಪಜ್ಜೆವಿಡಿದಿಂತಡಿಯಿಡುವೆನೆಂದು
ಧಾರುಣಿಯ ಜನಕಱುಪುವಂತೇಳುನೆಲೆಯುಪ್ಪರಿಗೆಯಡರ್ದರಂದಿರ್ವರು || ೨೪ ||

ವಿಳಸದಿಂದೆಣ್ದೆಸೆಯ ನಿಟ್ಟೆಸಲ್ ಗೋಪುರಂ
ಧಳಧಳಿಸಿ ಪೊಳೆವುತಿರೆ ನಂದಿಯ ಪತಾಕೆಗಳ್
ಫಳಫಳಿಸೆ ಗಗನದೊಳ್ ಪೊಂಗೆಲಸದಿಂ ಸಮೆದ ಕೋಂಟೆಗಳಿನಿರೆ ಕಾಣುತ |
ಪುಳಕದಿಂ ಗುಡಿಗಟ್ಟಿ ಚೇರಮಮಹೀಶ ಪೇ
ಳೆಳೆಯೊಳಚ್ಚರಿಯಿದೇನೆನೆ ದೇವ ತಿರುವಂಜ
ಕಳನಾಥನೆಂದು ಬಿನ್ನೈಸಿದಂ ಸತ್ಕುಲಲಲಾಮ ನೃಪಸಾರ್ವಭೌಮ ॥ ೨೫ ॥

ಕರ್ವಿಲ್ಲನಂ ಪಳಿವ ನಂಬಿಯಂದೇಱುದರ್
ಗರ್ವಪರ್ವತವನಿಳಿವಂತೆಯುಪ್ಪರಿಗೆಯಿಂ
ದುರ್ವಿಗವತರಿಸೆ ಪೆರುಮಳಲಿಯ ಕುಱುಂಬರ್ಗುಡಿಯನೆತ್ತಲಾ ತುಂಬುರಂ |
ಸರ್ವ ಚತುರಂಗಬಲದೊಡನೆ ಸೇವಿಸುತ ಬರೆ
ಕೊರ್ವಿದ ಪಯೋಧರದ ಪರವೆ ಸಂಕಿಲೆ ನಾಚಿ
ಯಿರ್ವರಂದಳವೆರಸಿ ತಿರುವಂಜಕಳನಾಥನಾಲಯಕೆ ನಡೆತಂದರು ॥ ೨೬ ॥

ಕಲಿ ದುರ್ವಿಚಾರರಹಿತಂ ನಿಳಯಮಂ ಪೊಗುತ
ನಲಿದು ತಿರುಪಾಟಿಂದೆ ನುತಿಸಿ ಸಂಸಾರಮಂ
ಗೆಲಿದು ಸಂತಸದಿ ಮಾಯಾಪಾಶಮೆನ್ನುವಂ ನುಲಿದು ಸುತ್ತಿರಲು ಪಱಿದು |
ಒಲಿದು ಸಲಹೆನಲಾಗಿ ನಂದಿಯುಂಡಿಗೆಗಳಿಂ
ಬಲಿದು ರಾಜಿಪ ಪೊಂಗಳೊಳಗೆ ರಾಯುಸವಿರಲು
ಪುಲಿದುಗುಲನೋಲೆಯಂ ನೀಳ್ಕೊಳುತ್ತಂ ನಂಬಿಯುಲಿದು ನಮಿಸುತ್ತೋದಿದಂ ॥ ೨೭ ॥

ಶ್ರೀಮದಖಿಲಾಂಬುಜಭವಾಂಡಗರ್ಭೀಕೃತಂ
ದಾಮೋದರಾಜೇಂದ್ರ ಮಣಿಮಕುಟಕಿರಣಪದ
ತಾಮರಸ ನಿಖಿಳಲೋಕಾರಾಧ್ಯ ವೇದಸನ್ನುತ ಭೋಗಮಲ್ಲೇಶ್ವರ |
ಸ್ವಾಮಿಯೆಮ್ಮಯ ಕುಮಾರಂ ನಂಬಿಯಣ್ಣಗಂ
ಪ್ರೇಮದಿಂ ಕಳುಪಿದ ನಿರೂಪವಿದು ನೀನೆಮ್ಮ
ನೇಮದಿಂದೈರಾವತಂ ಬಂದುದಡರ್ದೆಮ್ಮಪುರಕೆ ಬಹುದೆಂದಿರ್ದುದು ॥ ೨೮ ॥

ಶಿವನ ರಾಯಸವನಂತೋದುವನಿತರ್ಕೆಯೊ
ಪ್ಪುವ ಗಗನಮಾರ್ಗದಿಂದಾ ವೃಷಭನೆಂಬಿನಂ
ವಿವಿಧ ಶೃಂಗಾರದಿಂದೈರಾವತಂ ವಿಮಾನಾರೂಢ ಗಣ ನಿಕರದಿಂ |
ಅವತರಿಸೆ ತಿರುವಂಜಕಳನಾಥನಾಲಯಕೆ
ತವೆ ತುಂಬುರನ ಕರೆದು ಚೇರಮಂಗಱುಪೆಂದು
ಯುವತಿಯರ ಪುಷ್ಪಕದೊಳಿಟ್ಟಾನೆಯೇಱಿ ನಡೆದಂ ನಂಬಿ ಕೈಲಾಸಕೆ ॥ ೨೯ ॥

ಆಯುತದ ಕೈಲಾಸದೊಳು ಪುಷ್ಪದತ್ತನಾ
ಮಾಯಾರಿ ಮುಖ್ಯವಾದೆಮಗೆ ಕುಸುಮಾವಳಿಯ
ನೋಯಾರದಿಂ ಕೊಡುವವಂ ನಂಬಿಯೆನಿಸಿ ಭೂಮಿಯೊಳಿರ್ದು ಶಿವಪುರಕ್ಕೆ ।
ಶ್ರೀಯುಮಲ ಮುಕ್ತಿವನಿತೆಯ ಮದುವೆಗೆಯ್ದುವ ವಿ
ದಾಯದಾತನ ಮುಯ್ಯ್ಯ ತಿದ್ದಬೇಕೆಂಬಂತು
ಘೋಯೆಂದು ದೇವದುಂದುಭಿಯೊದಱೆ ಕಱೆದುದಾ ಹೂಮಳೆಯ ಗಣಸಮೂಹಂ ॥ ೩೦ ॥

ಬಳಿಕಲರಮನೆಯೊಳಗೆ ಚೇರಮಮಹೀಶ್ವರಂ
ಜಳಕಂಬೊಗಲ್ಕೆ ತೈಲಾಭ್ಯಂಗನಂ ಮಾಡಿ
ಕೊಳುತಿರ್ದ ಕಾಲದೊಳು ತುಂಬುರಂ ಬಂದು ಸಾಷ್ಟಾಂಗದಿಂ ನಮಿಸಿ ಹಸ್ತ ।
ನಳಿನಮಂ ಮುಗಿದು ಸುರಗಜದ ಕುಂಭಸ್ಥಳದೊ
ಳಳವಟ್ಟು ಸೌಂದರೇಶಂ ರಜತಪರ್ವತಕೆ
ಘಳಿಲನೆಯ್ದಿದನು ಪಚ್ಚೆಯ ಕುದುರೆಯಿತ್ತೆನ್ನ ಕಳುಪಿದಂ ಜೀಯಯೆಂದು ॥ ೩೧ ॥

ಎಂದ ಮಾತಂ ಕೇಳುತಾ ಸ್ನೇಹಪಾಶವೆಂ
ದೆಂದುವುಂ ಬೆನ್ನಬಿಡದೆಂಬಂತೆ ಶಿವಶಿವಾ
ಯಿಂದುಧರಭಕ್ತನಂತೆಣ್ಣಗಂಟಂ ತೊಡರ್ಚುತ್ತಲತಿವೇಗದಿಂದೆ ।
ಸೌಂದರಂ ಪೋದನೇ ಪೋದನಾವಾಗಳೈ
ಇಂದೀಗ ದೇವ ನಿಮ್ಮಡಿಗೆ ಬಿನ್ನೈಸು ನೀ
ನೆಂದೆನ್ನನಿರಿಸಿ ವನಿತೆಯರ ಪುಷ್ಪಕಸಹಿತಲೆಯ್ದಿದಂ ಜೀಯಯೆನಲು ॥ ೩೨ ॥

ಕೇಳಿ ಚೇರಮಮಹೀಶ್ವರನಧಿಕ ಕೋಪಮಂ
ತಾಳಿ ನಂಬುಗೆಯಿತ್ತು ಶಿವನೂರ್ಗೆ ಪೋಗುತ್ತ
ಪೇಳದಪೆನೆಂದೆನ್ನ ಬರವೇಳ್ದು ನಿನ್ನನಿರಿಸುತ ಪೋದುದಿದು ನಂಬಿಯ ।
ಚಾಳಿಯೇಯೆಂದುಱೆ ಛಡಾಳಿಸುತ್ತಂ ತನ್ನ
ತೋಳೊಳಳವಟ್ಟಿರ್ದ ಬಾಳ ಜಡಿವುತ್ತೀಗ
ಕೈಲಾಸಕಗ್ಗಳದ ದಾಳಿ ನಿಸ್ಸಾಳಮಂ ಸೂಳೈಸಹೇಳೆಂದನು ॥ ೩೩ ॥

ತಳಜಲಂ ಭಂಗವಡೆ ಕಮಠನೊಳಸಾರೆ ಫಣಿ
ಗಳರಾಯನಳ್ಕೆ ಕಾಲ್ಗೆಡೆ ವಿಸ್ಮಯದಿ ಮೂಗಿ
ನೊಳು ಕರವನಿಡೆ ದಿಗ್ಗಜಂಗಳಿಳೆ ಮಣ್ಗೂಡಿ ನಡುಗೆ ಬಡಬಂ ನೀರ್ವುಗೆ ।
ಕುಳನಗಂ ವೃಕ್ಷಾಳಿ ಕಲುಮರಗಳಾಗಳುಡು
ಗಳು ಚಲಿಸೆ ಬಯಲಾಗೆ ಗಗನವಂತಾಗ ಧಾಂ
ಧಳಧಳಧ್ವಾನದಿಂದೊದಱಿದವು ನಿಸ್ಸಾಳ ಭೇರಿ ರಿಪುನೃಪರ ವೈರಿ ॥ ೩೪ ॥

ಆ ರಾವಮಂ ಕೇಳುತಳ್ಕಿ ದಿಕ್ಕುಗುಳ್ದುವೋ
ಧಾರುಣಿಯುದೋಕರಿಸಿತೋ ಸುರಿದುದೋ ಗಗನ
ವೀ ರಭಸದೊಡವೆರಸಿ ಭಾಪೆನಲು ರವಿಗೆ ಸುರಪಂಗೆ ಯಕ್ಷೇಶ್ವರಂಗೆ ।
ನೈರುತ್ಯರಿವರಿಗಾ ತೇರಾನೆ ಕುದುರೆಯಾ
ಘೋರಂತೆಯೊಂದೊಂದವ್ವೈಸಲೇ ಲೆಕ್ಕಿಸುವ
ರಾರೆಂಬ ಮಾಳ್ಕೆಯಿಂ ನೆರೆದತ್ತು ಚತುರಂಗಸೇನೆ ಜಯಮುಯದ ಸೋನೆ ॥ ೩೫ ॥

ನಟ್ಟಿರ್ದ ಶೂಲದಿಂ ಲೋಹಬಂಧದ ಕೀಲ
ಬೆಟ್ಟಿರ್ದ ಚಕ್ರ ಚೀತ್ಕಾರದಿಂದಂ ನಲಿದು
ಕಟ್ಟಿರ್ದಱಂಕೆಗುದುರೆಗಳಿಂಗೆ ಪಲಗೈದುವೊಟ್ಟಿರ್ದ ಸಿರಿಯ ದಿವಿಯ ।
ಮುಟ್ಟಿರ್ದ ಹಳವಿಗೆಗಳಿಂ ಸೂತರಲ್ಲಿ ಬೊ
ಬ್ಬೆಟ್ಟಿರ್ದ ಚಪ್ಪರಣೆಯಿಂದೆಯಂತಾ ತೇರ
ವೆಟ್ಟಿರ್ದ ರಧಿಕರಿಂ ಚೀರಮುನ ಧಾಳಿಗಳವಟ್ಟಿರ್ದುದರರೆ ಸೇನೆ ॥ ೩೬ ॥

ನುಡಿವ ಜೋದರ್ಕಳಿಂ ಹಮ್ಮಿರ್ದ ಗುಳದಿಂದೆ
ಯಿಡುವ ಸೆಲ್ಲೆಹಗಳಿಂ ಪೊಂಗಂಟೆಯಿಂದೆ ಬೊ
ಬ್ಬಿಡುವಾರೆಕಾಱರಿಂ ಬರಿಕೈಗಳೆಡೆಯಲ್ಲಿ ಪಿಡಿದ ಪಟ್ಟೆಹದಿನಿಳಿಯ ।
ಬಿಡುವ ಝುಲ್ಲರಿಗಳಿಂ ಪತ್ರಗತಿಯಿಂ ಮುಂದೆ
ಹೊಡೆವ ಡೌಡೆಗಳಿಂದೆ ಸೊಕ್ಕಾನೆಗಳು ಕೂಡಿ
ನಡೆವ ವಿಭವಂ ಭಾಪುರೇ ಚೀರಮುಂ ಧಾಳಿಯಿಡುವ ಸೇನೆಯೊಳೆಸೆದುದು ॥ ೩೭ ॥

ಉಡಿಯ ದಟ್ಟಿಯ ಕರಾರದ ಬಿಲ್ಲ ಶರದಕ್ಕೈ
ಪೊಡೆಯಾಳ್ಗಳಿಂ ಜೋಡು ಮುಂದಲೆಯ ಗಂಟೆ ನಾ
ಗಡೆಯುವರ್ಗಳಿಂ ಪಲವು ವರ್ಣದಿಂದೆಸೆವುತಿಹ ಬಿರಿದಿನಗ್ಗದ ಹರಿಗೆಯ ।
ಪಡೆಯುವದಿರೆಲ್ಲರುಂ ಕೂಡೆಯೊಗ್ಗಿಂದೆ ಮುಂ
ಗಡೆಯೊಳಾಹಾಯೆಂದು ದನಿದೋಱಿಯುಱುಪಿ ನೆಲ
ದೊಡೆಯಂಗೆ ಮಿಗೆ ಕರಂಗಳಂ ಮುಗಿವುತಲ್ಲಿಂದ ತಳೆಯುದೆಳ್ತರುತಿರ್ದರು ॥ ೩೮ ॥

ಪೇರುರಂ,ನೀಳ್ದ ಕೊರಲೆರಲೆಗಣ್ ಪೆಱಿನೊಸಲು
ನೇರ ತೆಳ್ಪಂ ನಯಂಬಡದಿಹ ಕದಂಪುಗಳು
ಮೋರಂತೆ ಬಟ್ಟಿತಾಗಿರ್ಪ ಶಿರವಾ ಪೃಥುನಿತಂಬವಾ ಸಣ್ಣಬಾಲಂ ।
ಸಾರತರಮಾದ ಪಣೆಯೆರ್ದೆ ಕಿವಿಯ ಮೊದಲೊಳಗೆ
ಸೇರಿರ್ಪ ಸುಳಿಗಳೀರಾಱು ದಂತಂಗಳಿಂ
ದೋರಣಂಗಳನಸಿಯ ಜಿಹ್ವೆಯ ಸಲಕ್ಷಣದ ವಾರುವಗಳೊಪ್ಪಿರ್ದವು ॥ ೩೯ ॥

ವರಪಂಚಕಲ್ಯಾಣಿಯುಂ ಗಗನದೇಣಿಯುಂ
ಧುರವಿಜಯ ಜಂಬನಂ ರಿಪುಶಿಖರಿ ಶಂಬನಂ
ಹಿರಿದಪ್ಪ ಬೊಲ್ಲನಂ ಚಾರುರಣಮಲ್ಲನಂ ಸಾರಂಗನಂ ತುಂಗನಂ ।
ತರವಡೆಯನಂ ವಾಜಿಸಂದೋಹದೊಡೆಯನಂ
ಕರಮೆಸೆವ ನೀಲನಂ ವೈರಿಕುಲಕಾಲನಂ
ತುರಗಾಳಿಯಂ ಹರಪುರಕ್ಕಿಡುವ ದಾಳಿಯಂ ಭಾಪು ಬಣ್ಣಿಸುವೊಡಳವೆ ॥ ೪೦ ॥

ಪರಮ ಸ್ವತಂತ್ರವಿಲ್ಲದ ಸರಳು ಸರಳಿಗ
ಚ್ಚರಿಯೆನಲ್ ಸಿಕ್ಕುವಾ ಹರಿಣವಾ ಹರಿಣನಂ
ಪರಿದಡರಿದಲ್ಲದಡಿಯಿಡದ ಮರುತಂ ಮರುತನೆಸಗಿದಲ್ಲದೆಯೆಸಗದ ।
ಮರಮನಂ ಮನದ ಬೆಂಬಳಿಯಲ್ಲದೆಯ್ದದಿ
ರ್ಪುರು ದೃಷ್ಟಿಗಳ್ ಸರಿಯೆ ಲಿಂಗಪ್ರಸಾದಿ ಭೂ
ವರನ ಧಾಳಿಗೆ ಗಗನದೊಳ್ ನಡೆವ ತೇಜಿಗೆ ವಿಶೇಷ ಸುಗುಣ ಸಮಾಜಿಗೆ ॥ ೪೧ ॥

ಹೊನ್ನ ಹಲ್ಲಣದಿಂದೆ ರನ್ನವಕ್ಕರಿಕೆಯಿಂ
ದುನ್ನತದ ಗೆಜ್ಜೆಯಿಂದಂ ನೆಲನ ಚುಂಬಿಸುವ
ಸನ್ನುತದ ಚಮರದಿಂ ಬಿನ್ನಣದ ಮೊಗವಡದ ಚೆನ್ನಮುತ್ತಿನ ದಂಡೆಯಿಂ ।
ಕನ್ನಡಿಯ ಹಣೆಗಳಿಂದಂ ನೆಟ್ಟ ಕಿವಿಗಳಿಂ
ಬಿನ್ನವಿಲ್ಲದ ಕಡಿಯಣಂ ನಾಡೆ ಲೋಳಾಜ
ಲನ್ನೆಗೆವ ಧೂಳಿಯಿಂ ತಾಂ ನಿಮಿರ್ದು ಸಿಮ್ಮಿಸಲ್ ಕೆನ್ನನೊದಗಿದವು ತುರಗಂ ॥ ೪೨ ॥

ಪಕ್ಕರಕ್ಕೆಯ ಕಂದವಕ್ಕರೆಯ ಕಡಿಯಾಣ
ದುಕ್ಕಲದ ಮೊಗಮುಟ್ಟು ಮುಂತಾದ ಸಂಜೋಗ
ಕಿಕ್ಕಿರ್ದ ಕಳಿಗೆಗಳೊಳೆಡವಿಡದೆ ಕೀಲಿಸಿದ ಮುಕ್ಕಣ್ಣ ರುದ್ರಾಕ್ಷೆಯಿಂ ।
ಮೊಕ್ಕಳದೊಳಳವಟ್ಟ ಪೆರ್ಮೆಯಿಂ ಹಲ್ಲಣಿಸಿ
ದಕ್ಕಜದ ರಾಜಾಶ್ವವಾಶೀತಿ ಸಾಹಸ್ರ
ವಿಕ್ಕೆಲದ ಹೇಷಾರವಂಗಳಿಂದಂದು ಗಗನಕ್ಕೆ ಕಾಲಿಡುತಿರ್ದವು ॥ ೪೩ ॥

ಪಂಚಪಲ್ಲವದ ತೇಜಿಗಳ ಸಿಂಗರಿಸಿ ತರು
ತುಂ ಚಮತ್ಕಾರದಿಂ ಸಹಣಿಗಳು ಮುಂದಿಡೆ ಪ್ರ
ಳಂಚನೋಯಾರದಿಂ ವಳಯಮಂ ಹಾರದಂಕಣಿಗೆ ಪದತಳಮನಿಡದೆ ।
ಪಂಚಾಕ್ಷರಿಯ ಹೊಗರನುಗುಳ್ವ ಬಾಳದು ಕಾರ
ಮಿಂಚಿಂಬ ಮಾಳ್ಕೆಯಿಂದಿರೆ ಪಿಡಿದು ಜಡಿದಡರ್ದು
ಸಂಚಳಿಸದೇಱು ವಾಜಿಗಳ ತೋಱುತ್ತಿರ್ಪ ಗೋಳಾಯಿಲರ್ ನೆಱೆದರು ॥ ೪೪ ॥

ವಾರುವಂಗಳನಡರ್ದು ರುದ್ರಾಕ್ಷೆಯಿಂ ಸಮೆದ
ಪೂರೈಪ ಜೋಡುತಲೆ ರೌಳಿಯಾ ರಾಘೆಗಳ
ನೋರಂತಿರಿಟ್ಟು ಭಸ್ಮೋದ್ಧೂಳನಂಗೆಯ್ದು ಶಿವಮಂತ್ರಮಂ ಜಪಿಸುತೆ ।
ನೇರಿತಹ ಬೀದಿಯೊಳು ಸವ್ಯಾಪಸವ್ಯದಿಂ
ಚಾಱಿವಱಿದಾಡಿಸುತಲಾ ಮನಂ ನೆನೆದವೊಲ್
ಭೂರುದ್ರರಾ ರುದ್ರಲೋಕಕ್ಕೆ ಧಾಳಿಯಂ ಮಾಡಿದರದೆಂತೆಂದೊಡೆ ॥ ೪೫ ॥

ಭವಿವೇಷದಿಂದೀಶನನ್ನಮಂ ಬೇಡೆಯಾಂ
ಶಿವಭಕ್ತರ್ಗಲ್ಲದಿಕ್ಕೆನೆನೆ ಬಿಡು ಸಮಾ
ನವದಲ್ಲವೇ ಪಸಿವದೆಲ್ಲರ್ಗೆ ತಾನೆನಲ್ಕಟ್ಟಲೋಡುತ್ತಭವನು ।
ದಿವಿಯನಡರಲ್ ಕುಲಂಜಿತ್ತಿಯಾಂಡಾರು ಕೂ
ಡವನ ಬೆಂಬತ್ತಿ ಕೈಲಾಸಮಂ ಪೊಕ್ಕಂತೆ
ತವೆ ಪೋಪ ನಂಬಿಯಣ್ಣನ ಪಿಂತೆಯಾಗಸಕೆ ಧಾಳಿಯಿಟ್ಟಂ ಚೇರಮಂ ॥ ೪೬ ॥

ಬೆರಲ ಬೊಬ್ಬೆಗಳಿಂದೆ ಹೊಯ್ವ ರಣಭೇರಿಯ
ಬ್ಬರದಿಂದೆ ಬಂದೆ[ವಾ] ಪತಿಱು ವಂಚಿಸಿ ನಿನ್ನ
ಪುರಕೆ ನಂಬಿಯ ಕೊಂಡುಹೋಗಿ ಜೀವಿಸುವೆಯಾ ಹುಲುರಕ್ಕಸರ ಹುರಗಳ ।
ಉರುಹಿಯಾ ಪೇತುಗೋಣನನೇಱಿ ದಾತನಂ
ಹಱಿಸಿರ್ದ ಗರ್ವವೇ ಚೇರಮಾಂಕನೊಳು ತೆಗೆ
ಹರಯೆಂದು ಮೂದಲಿಸಿ ಬಿಱಿದೆತ್ತಿ ಕರೆವ ಕಹಳೆಗಳಿಂದೆ ನಡೆದರಾಗ ॥ ೪೭ ॥

ಪುಲ್ಗಚ್ಚಿಕೊಂಡಿರ್ದಡಂ ಮಕ್ಕಳಗಿದಿಡುವ
ಬಲ್ಗಯಿದು ಗನನೆ ಕೈಪಱಿಗುಟ್ಟಿ [1]ಬಂದಾಡ[1]
[2]ವೊ[2]ಲ್ಗಮ್ಮನೋಡುತಿಹ ತಿರುವನೊಂದೇಜಾವದೊಳ್ ಕೆಡುವ [3]ಕಂ[3]ಪುಣುಬನ (?) ।
ಬಲ್ಗಯ್ಯನವನೆಂದು ಕೊಂದ ಗರ್ಬವೆ ಕೇಳು
ಕಾಲ್ಗಣ್ಣ ತೆಗೆ ಎಂದು ಚೀಱಿ ಮೂದಲಿಸುತಿಹ
ವೊಲ್ಗಾಡಿಗಾಳೆಗಳನೊದಱಿಸುತ ನಡೆದನಾ ನಲ್ಗರುವ ಚೇರಮಾಂಕಂ ॥ ೪೮ ॥

ಕಿನ್ನರರು ಖಿನ್ನರಾದರು ಅಮರರಳ್ಕಿದರು
ಮುನ್ನ ವೈಕುಂಠದವರೆಲ್ಲ ಕುಂಠಿತರಾದ
ರುನ್ನತದೊಳಿಹ ಸತ್ಯಲೋಕದವರೆಯ್ದೆ ಬೆಬ್ಬಳಿಸಿ ಸತ್ವಂಗೆಟ್ಟರು ।
ಚೆನ್ನಗರುಡರು ಗರುವಿಕೆಯನುಳಿದರೆಸೆವ ಸಂ
ಪನ್ನ ಗಂಧರ್ವರಾ ಗಂಭೀರತೆಯ ಬಿಟ್ಟ
ರೆನ್ನೊಡೆಯ ಚೇರಮನ ಧಾಳಿ ಬಹ ಬೊಬ್ಬೆಯಬ್ಬರಕೆನಲದೇವೊಗಳ್ವೆನು ॥ ೪೯ ॥

---

[1] ಬಂಡಾದ (ಗ). [2] ಕೋ (ಗ). [3] ಕೆಂ (ಗ).

ಸುರವರಂ ಸುಗಿದೋಡೆ ಹುತವಹಂ ಹುಚ್ಚಾಗೆ
ವರ ಕಾಲನಳ್ಕಿ ಕಾಲ್ಗೆಡೆ ನಿರುತಿ ನೀತಿಗೆಡೆ
ವರುಣನಾ ವಾರಿಧಿಯ ಸಾರಲಾ ಮರುತನೇ ಮತಿಗೆಟ್ಟು ಮಂಕಾಗಲು ।
ಹರಸಖಂ ಹಮ್ಮೈಸಲೀಶಾನ್ಯನಿರದೋಡೆ
ಪರಿದು ಬೊಬ್ಬೆಗಳಾರ್ಭಟಂಗಳಿಂ ಮರ್ಚುರೆ ಭಾ
ಫುರೆಯೆನಲ್ ಬಂದುದಾ ಚೇರಮನ ಧಾಳಿ ಘನವಿಭವ ಭಕ್ತಾಳಿಯೋಳಿ ॥ ೫೦ ॥

ಉಱೆ ತೇರ್ಗಳಗ್ಗಳ ತುಱುಂಗಲಿಂದಂ ಪಲ್ಲ
ಮಱೆಗಳೇಳ್ಗೆಗಳ ಬಂಬಲ್ಗಳಿಂದಂ ಮಿಸುಗು
ವೆಱಕೆಗುದುರೆಗಳ ಬಿಂದಂಗಳಿಂ ಮನ್ನೆಯರ ದೊಂದುಳಿಗಳಿಂ ಸಿಂಗರಂ ।
ಮೆಱೆವ ಪಳೆಯರ ಗುಮ್ಮಿಯಿಂ ಪೊಗಳ ಸೊಗಸ ಸೈ
ಗಱೆವ ಪಾತಕರ ಗೊಂಚಿಗಳಿಂದೆ ಜಡಿಜಡಿದು
ಮಿಱುಪ ಖಂಡೆಯದ ಕಾಲಾಳ ಗುಂಡಂಗಳಿಂ ನಡೆದನಾಹಾ ಚೇರಮಂ ॥ ೫೧ ॥

ಪಕ್ಕರಕ್ಕೆಗೆ ಕಣ್ಗಳೊಗೆದಂತೆ ರುದ್ರಾಕ್ಷೆ
ಸೆಕ್ಕಿದೆಂಭತ್ತುಸಾವಿರ ಕುದುರೆಯಿಂ ಧಾಳಿ
ಯಿಕ್ಕಿ ಪೋಗುತ್ತಲಿಡೆವಟ್ಟೆಯೊಳು ಸಂಕಿಲೆಯ ಗಂಡನಂ ಬೆಳ್ಳಾನೆಯಂ
ಅಕ್ಕಜದೊಳೇಱಿದುದ್ದಂಡನಂ ಭಾಪೆಂಟು
ದಿಕ್ಕು ತುಂಬಿದ ಕೀರ್ತಿಪಿಂಡನಂ ಸುಗುಣಮಣಿ
ಗಿಕ್ಕೆ ಪೊಂಗೆಲಸದ ಕರಂಡನಂ ನಂಬಿಯಂ ಕಂಡನಂದಾ ಚೇರಮಂ ॥ ೫೨ ॥

ಚೇರಮನು ನಂಬಿಯಣ್ಣನ ನಂಬಿಯಣ್ಣನಾ
ಚೇರಮನನೊಲಿದು ಕಾಣುತ್ತ ಸದ್ಭಕ್ತಿಯಿಂ
ದೋರಂತೆ ನಲ್ಮೆಯಿಂ ವಾರುವಂಗಳನಿಳಿದು ಕೂರ್ಮೆಯಿಂ ತಕ್ಕೈಸುತ ।
ಪೂರೈಪ ವಿನಯಪರರಾಗಿರಲ್ ತುಂಬುರ ವಿ
ಚಾರಪರಮಂತ್ರಿಗಳ್ ಸೌಂದರೇಶನ ಪಾದ
ವಾರಿಜಕೆ ನಮಿಸೆ ತತ್ಸೇನೆ ಸಹಿತಲ್ಲಿಂದ ಭೋರನೆಳ್ತರುತಿರ್ದರು ॥ ೫೩ ॥

ಪುರುಷನಿರಿಸಿದ ಚೂತಫಲವನೀಶಂಗಿತ್ತು
ಮರಳಿ ಶಿವನಾಜ್ಞೆಯಿಂ ಕೊಟ್ಟೊಡಾ ಪತಿ ನಮ
ಸ್ಕರಿಸೆ ಕಳುಪಲು ಪಿಂದೆ ಕಾಮುಕರು ಬರೆ ಮಾಂಸಮಂ ಬಿದಿರ್ದು ತನ್ನಸ್ಥಿಯ ।
ಶರಿರದಿಂದಭವ ನೃತ್ಯವನೀಕ್ಷಿಸುತ್ತಖಿಳ
ಶರಣರಡಿವಜ್ಜೆಯೊಳು ತಲೆಯೂಱಿ ಕೈಲಾಸ
ಸರಣಿಯೊಳು ಬಹ ಕಾರಿಕಾಲಮ್ಮೆಯಂ ನೋಡಿ ಪೊಗಳುತಿರ್ವರ್ ನಡೆದರು ॥ ೫೪ ॥

ರಾಜಹಂಸೆಯನಡರಿ ನಟಣೆಯಂ ತೋಱುಸುತೆ
ಯೋಜೆಯಿಂ ಬೆಳ್ಳಾನೆಯೇಱ ಹರಿದಾಡಿಸುತೆ
ತೇಜದಿಂ ಗರುಡನಂ ದಿವಿಗೆಯ್ದೆ ಹಾಱುಸುವವಂದಿರಂ ದಿಕ್ಪಾಲರಂ ।
ರಾಜದೇವ ಬ್ರಹ್ಮರುಷಿಗಳಂ ವರಕಲ್ಪ
ಭೂಜವೊಪ್ಪುವ ಪರುಸದದ್ರಿಯ ಸುರಭಿಗಳ ವಿ
ರಾಜಿಸುತ ಶಿವನೋಲಗಕ್ಕೆ ಬರ್ಪರ ನೋಡಿ ಹರುಷಿಸುತ ಬರುತಿರ್ದರು ॥ ೫೫ ॥

ಈಬಂದನಿದೆ ನಂಬಿ ಶಂಕರ ಪ್ರತಿಬಿಂಬಿ
ಯಿಾಬಂದನಿದೆ ಗೋಧರಂ ಕನಕಭೂಧರಂ
ಯಿಾಬಂದನಭವನಂ ಪಾಡಿ ಮೆಚ್ಚಿಸಿಕೊಂಡ ಗಂಧರಂ ವರಸೌಂದರಂ ।
ಈಬಂದನಿದೆ ಕೇರಳೇಶ್ವರ ಮಹೇಶ್ವರಂ
ಯಿಾಬಂದನಿದೆ ಪುಷ್ಪದತ್ತನುತ್ತಮಚಿತ್ತ
ನೀಬಂದನಿದೆ ಚೇರವೀರನೆಂದೆಂಬ ಬಿರಿದಿನ ಕಹಳೆ ಕರೆದವಾಗ ॥ ೫೬ ॥

ಎಂಬ ಕಹಳಾರವಂಗೇಳುತಾ ನಂದೀಶ್ವ
ರಂ ಬರ್ಪರಾರೆಂದು ನೋಡುತಿರ್ಪನಿತಕೆ ಕು
ಱುಂಬರೆಯ್ತಂದು ಗುಡಿವಿಡಿದು ನಿಲೆ ನೀವಾರೆನಲ್ಕೆ ಚಿತ್ತೈಸು ದೇವ ।
ನಂಬಿ ಚೇರಮರು ಕೈಲಾಸಕ್ಕೆ ಬರುತಿರಲು
ಮುಂಬಿನೊಳ್ ಬಂದಾತ ನಾನೆನಲು ನೋಡಲಾ
ಡಂಬರದ ಚತುರಂಗಸೇನೆಯಂ ಕಂಡನಾ ಸಾಂಬವರ ಧರ್ಮರೂಪಂ ॥ ೫೭ ॥

ನೆಟ್ಟನಾ ಕೈಲಾಸ ಪಟ್ಟಣದೊಳದ್ಭುತಂ
ಪುಟ್ಟಲೆಲ್ಲಿಯ ರಭಸವೆಂಬಲ್ಲಿ ನಡೆತಂದು
ದಿಟ್ಟಮೂಱಱದೇವನಡಿಗೆಱಗಿ ಕೈಮುಗಿದು ನಂದಿ ಭೂಲೋಕದವರು ।
ಇಟ್ಟಣಿಪ ಚತುರಂಗಸೇನೆಯೊಡಗೂಡಿ ಬಲು
ದಿಟ್ಟರಸರಿರ್ವರೆಯ್ತರುತಿರಲು ಮುಂದೆ ಗುಡಿ
ಗಟ್ಟಿದಾತನ ಕೇಳೆ ನಂಬಿ ಚೇರಮರೆಂದನಯ್ಯ ಚಿತ್ತೈಸೆಂದನು ॥ ೫೮ ॥

ಎಂದ ಮಾತಂ ಕೇಳಿಯವರು ಮಾನವರಲ್ಲ
ನಂದಿಯೆಮ್ಮಯ ಭಕ್ತರದಱಂದೆ ಕೈಲಾಸ
ಮಂದಿರವನೊಲ್ದು ಸಿಂಗರಿಸಿ ಗಣನಿಕರದೊಡವೆರಸಿ ನೀಂ ಸಂಭ್ರಮದೊಳು ।
ಇಂದು ಕೂರ್ತಿದಿರ್ಗೊಂಡು ಕರೆತಪ್ಪುದೆನೆ ಸುಗುಣ
ವೃಂದಂ ಹಸಾದವೆನುತಳ್ತಿಯಿಂದಲ್ಲಿಂದೆ
ಬಂದು ಪುಳಕಿಸುತಲೆಲ್ಲರನೆಯ್ದೆ ನೆರಪಿದಾ ಸಂದಣಿಯನೇನೆಂಬೆನು ॥ ೫೯ ॥

ಸಂಗಡಿಸಿ ಪಿಡಿವ ಪೆರ್ಗಾಳೆಯಿಂ ಧೂಪಧೂ
ಮ್ರಂಗಳಿಂ ಪಲ್ಲವದ ಸತ್ತಿಗೆಗಳಿಂ ಚಾಮ
ರಂಗಳಿಂ ನರ್ತಿಸುವ ರಂಭೆಯೂರ್ವಶಿಯರಿಂದುಬ್ಬಿಬೆಂಬ ವೀರರ್ಕಳಿಂ |
ಭೃಂಗೀಶ್ವರನ ತಾಂಡವಂಗಳಿಂದುಘೆಯೆಂಬ
ವಂಗಡದ ರಸದಾಳಿಗಳನಾಂತು ಕುಣಿವವರ್ಗ
ಳಿಂ ಗಣಕುಲಂ ಕಲ್ಪಕುಜದ ಪುಷ್ಪಾಂಜಲಿಗಳಿಂದಿದಿರ್ಗೊಂಡರಂದು || ೬೦ ||

ನಂದೀಶ್ವರಾದಿ ಗಣತಿಂತಿಣಿಗಳಿದಿರ್ಗೊಳಲು
ಸೌಂದರಾಧಿಪ ಚೇರಮಾದಿಗಳು ಭಕ್ತಿಯಿಂ
ವಂದಿಸಲು ಸರ್ವರಂ ತನ್ನ ಬಾಗಿಲೊಳಿರಿಸೆ ಶೈಲಾದಿ ನಂಬ್ಯಣ್ಣನು |
ಅಂದು ಗುಡಿವಿಡಿದನಂ ಕರೆದುಕೊಂಡೀಶ್ವರನ
ಮುಂದಿರಿಸೆ ಸಾಷ್ಟಾಂಗದಿಂ ನಮಿಸಿ ನಂಬಿಯಾ
ನಂದದಿಂ ಶಿವಗೆ ಬಿನ್ನವಿಸುತ ಕುಱುಂಬರ್ಗೆ ಗಣಪದವಿಯಂ ಕೊಡಿಸಿದಂ || ೬೧ ||

ಆ ರುಚಿರ ಸೌಂದರಂ ಮತ್ತೆ ಬಿನ್ನವಿಸಿದಂ
ಚೇರಮಂ ಬಂದು ಬಾಗಿಲೊಳೈಧನೆಲೆ ದೇವ
ಕಾರುಣ್ಯದಿಂ ಕರೆಸವೇಳ್ಕೆನಲು ಮರ್ತ್ಯದೊಳು ಪರಮಭಕ್ತಿಯನೆಸಗುವ |
ಚಾರು ಸೇವೆಗಳಿಗಾವೇಂ ಕಂಟಕತ್ವದಿಂ
ಬಾರೆಂದೆವೇಯೆಂದೊಡೆಲೆ ದೇವ ತಾಂ ಪೇಳ್ದ
ದಾರ ಕಾವ್ಯವನೋದಿ ನಿಮಗೆ ಬಿನ್ನವಿಸಲೆನ್ನುವನಗಲದೆಳ್ತಂದನು || ೬೨ ||

ಎಂದಡೊಳ್ಪೆತ್ತ್ರೈ ಮದಾದೇಶವಿಲ್ಲದೆ
ಳ್ತಂದನದಱಿಂದೆ ನೀನುಪದೇಶಿಸುತ್ತಲೆಲೆ
ನಂದಿಯೊಡಗೊಂಡು ಬಾರೆನಲಂತುಗೆಯ್ದು ಕರೆದೊಯ್ದು ಶಿವನಿದಿರೊಳಿರಿಸೆ |
ಇಂದುಮೌಳಿಯ ಪದಾಂಬುಜಕೆ ಸಾಷ್ಟಾಂಗದಿಂ
ವಂದಿಸುತೆ ಕರಕಮಲಮಂ ಮುಗಿದು ನಿಲೆ ಸದಾ
ನಂದ ಚೇರಮನ ತಳ್ಕೈಸಿ ಮುಂಡಾಡಿದಂ ಶರ್ವನಾನತ ಸುಪರ್ವ || ೬೩ ||

ನೋಡು ನಂದೀಶ ನಮ್ಮಯ ರಾಯಸಂಗಂಡು
ಕೂಡೆಯಾ ಭದ್ರಗಾಯಕಗಿಷ್ಟವಿತ್ತನಂ
ನೋಡು ಭೃಂಗೀಶ ನಮ್ಮಂ ಕುಣಿಸಿದಾತನಂ ಮಿಸುಪ ಸೌಂದರ ಮೋಹಿಯಂ |
ನೋಡೈ ಕುಮಾರಕಾ ಸದ್ಭಸಿತಕಾಯನಂ
ನೋಡು ವೀರೇಶ ನಮ್ಮಯ ಪುರಕೆ ದಾಳಿಯಿಂ
ಮಾಡಿದೀ ಚೇರಮಾಂಕನನೆಂದು ನಲಿದು ಕೊಂಡಾಡುತಿರ್ದಂ ಶಂಕರಂ || ೬೪ ||

ಉದ್ಭಟಯ್ಯಂ ಹಲಾಯುಧದೇವರತ್ಯಧಿಕ
ಚಿದ್ಭರಿತ ಸಾಮವೇದಿಗಳು ಮಳಯಾವನೀ
ಭೃದ್ಭುಜಕರಿವರಾದಿಯಾದವರು ನುತಿಸುತೆನ್ನಯ ಕರುಣಮಂ ಪಡೆವುತ |
ಮದ್ಭವನಕಾಂ ತರಲ್ ಬಂದರೈಸಲೆ ಭಾಪು
ಸದ್ಭಾವಿ ಚೇರಮಂ ಚಾತುರ್ಬಲಂಗೂಡಿ
ಯದ್ಭುತವೆನಲ್ಕೆ ಕೈಲಾಸಕಂ ಧಾಳಿಯಿಟ್ಟಾತನಂ ನೋಡಿಯೆಂದಂ || ೬೫ ||

ಮತ್ತೆಯಾ ಸೌಂದರೇಶನನಳ್ಕಱಿಂ ನೋಡಿ
ಚಿತ್ತಜಹರಂ ಮುನ್ನಿನಂತೆ ರಾಜಿಪ ಪುಷ್ಪ
ದತ್ತನಪ್ಪಮಲ ಗಣಪದವಿತ್ತ ತುಂಬುರ ವಿಚಾರಪರರಾದಿಯಾದ |
ಮೊತ್ತದಾಗಿರ್ದ ಚತುರಂಗಸೇನೆಯುನಂತು
ದಾತ್ತವೆಂದೆನಿಸುವಾ ರುದ್ರಲೋಕದೊಳಿರಿಸಿ
ಚಿತ್ತಶುದ್ಧದೊಳು ಚೇರಮನ ಸತ್ಕಾವ್ಯಮಂ ಕೇಳಲೆಂದುಜ್ಜುಗಿಸಿದಂ || ೬೬ ||

ವರವೀರಕಂ ನಂದಿ ರೇಣುಕಂ ದಾರುಕಂ
ಕರಿವದನನಾ ಭೃಂಗಿಯುಪಮನ್ಯು ವೀರಭ
ದ್ರರು ಷಣ್ಮುಖಂ ಪ್ರಮಥರುಂ ಸಹಿತ ಪಾರ್ವತಿ ಸಮೇತವಾಗುತ ನಲ್ಮೆಯಿಂ |
ಹರನೊಂದು ಗದ್ದುಗೆಯೊಳಳವಟ್ಟು ತನ್ನ ನಿಜ
ಹರಿಪೀಠಮಂ ಚೇರಮಂಗಿತ್ತು ಬಳಸಿರ್ದ
ಪರಮ ಗಣಕುಲದೊಳಾ ಸತ್ಕಾವ್ಯಮಂ ಕೇಳುತಿರ್ದನೇವಣ್ಣಿಸುವೆನು || ೬೭ ||

ಒಪ್ಪುವಭವಂ ಚೇರಮನ ದಿವ್ಯಕಾವ್ಯಮಂ
ತಪ್ಪದೋದಿಸುತಲಾನಂದಿಸುತ ಬಾರೆನ್ನ
ಬೊಪ್ಪಯೆಂದಡಿಗಡಿಗೆ ಮುದ್ದಿಸುತೆ ಕೇರಳನ ಹರುಷದಿಂ ಲಾಲಿಸುತ್ತ |
ಒಪ್ಪಿದಂ ಗಣಪದವನಿತ್ತು ಸರ್ವೇಶನೊ
ಲ್ದೊಪ್ಪಿದಂ ಸಕಲಲೋಕಾಧೀಶನುಱೆ ಕೃಪೆಯೊ
ಳೊಪ್ಪಿದಂ ಭೋಗಮಲ್ಲೇಶನಘನಾಶ ಧೃತಕೇಶ ದಿವ್ಯಪ್ರಕಾಶ || ೬೮ ||

ದೇವವಾಕ್ಯಂ ಶಾಲಿವಾಹನಶಕಂ ನಡೆದ
ಪಾವನಾಬ್ದದ ಸಧರ್ಮವ್ಯಯದ ಕಾರ್ತೀಕ
ದಾ ವಿಮಲ ಶುದ್ಧಪಾಡ್ಯೋದಯಂ ರವಿದಿನಂ ಸ್ವಾತಿಸುಪ್ರೀತಿಯೋಗಂ |
ಭಾವಿಸಲ್ ಕವಿತುಲಾರಾಶಿ ಶಶಿತಾರೆಗಳು
ತೀವಿರ್ದ ಸನ್ಮುಹೂರ್ತದೊಳಧಿಕ ಸೌಖ್ಯದಿಂ
ಭೂವರಂ ಚೇರಮಾಂಕನ ಚರಿತ್ರಂ ನಾಡೆ ಸಂಪೂರ್ಣಮಾಯ್ತು ಚೆಲ್ವಿಂ || ೬೯ ||

ನವಸುರಭಿ ಕರೆಯಲಿ ಸುಭಿಕ್ಷಂಗಳಾಗಲಿ
ಭುವನಾಧಿಪತಿಗಳ್ಗೆ ಶಂಕರನ ಸೇವೆ ಸಂ
ಭವಿಸಲಿ ಸದಾ ಸುಜನಸಂಕುಲಕೆ ವೈಭವಂ ಭಕ್ತಿಮುಕ್ತಿಗಳೊದಗಲಿ ।
ಅವನಿ ರವಿಶಶಿ ದಿವಿಗಳುಳ್ಳನ್ನೆವರಲುಮಾ
ಧವನ ಕೃಪೆಯಿಂ ಚೇರಮಾಂಕನ ಚರಿತ್ರಮಂ
ತವೆ ರಸಿಕರಾಲಿಸಲಿ ಶುಭಮಸ್ತು ಕಲ್ಯಾಣಮಸ್ತು ಶಿವಮಸ್ತು ಸತತಂ ॥ ೭೦ ॥

ರಸಿಕರಾಹಾಯೆನಲು ಭಾವಕರು ತಲೆದೂಗೆ
ಪೊಸಬಗೆಯಿದೆಂದು ಕೊಂಡಾಡೆ ಲಾಕ್ಷಣಿಕರಾ
ಲಿಸಲು ವಿದ್ವಜ್ಜನಂ ಪೇಳಿದೀ ಕಾವ್ಯಕ್ಕೆ ಹನ್ನೊಂದು ಸಂಧಿ ಪದನು ।
[1]ಎಸಕದ್ಯೆನೂಱ ಮೇಲೆಪ್ಪತ್ತಯ್ಯೆದಱಿಂ
ದೊ[1]ಸೆದು ಪರರುಕ್ತಿಗಳ ಮನವಱಿದು ತಂದು ಸೇ
ರಿಸದೆ ಗುರುಮಲ್ಲಣಾರ್ಯರ ಕೃಪೆಯೊಳುಸುರ್ದೆನಾಂ ಶರಣರಹುದಹುದೆಂಬಿನಂ ॥ ೭೧ ॥*

ಅಮಮ ಕರಿಮುಖಜನಕ ಕಮಲಾಕ್ಷನತಪಾದ
ದಮಿತಾಘ ಶಶಿಚೂಡ ಡಮರುಹಸ್ತೋತ್ತುಂಗ
ಗಮನಾಗಮನ ದೂರ ರಮಣೀಯತರಕಾಯ ಯಮಕಾಲ ಹರಸುವಿಪ್ರ ।
ಪ್ರಮಥೇಂದ್ರ ಜಿತಮದನ ನಮಿತಜನ ಸುರಭೂಜ
ಜಮದಗ್ನಿನುತ ಸರಸಸಮಯ ಪಾವನಜೀವಿ
ವಿಮಲತಾಪಸ ಮೋಹಿ ಹಿಮಗಿರಿಸುತಾರಾಮ ಮಮರಕ್ಷ ಭೋಗಮಲ್ಲ ॥ ೭೨ ॥

ಇದು ಸಕಲ ಭಕ್ತಪದಪದ್ಮ ಮಧುಕರಪುಣ್ಯ
ಸದನ ಗುಬ್ಬಿಯ ಮಲ್ಲಣಾರ್ಯರ ಕೃಪಾಪಾತ್ರ
ಮುದಿತ ನವರಸ ಭಾವ ಲಕ್ಷಣಾಲಂಕಾರನಿಪುಣನೆಂದೆನಿಸಿ ಮೆಱೆವ ।
ಚದುರ ಚೇರಮನೊರೆದ ಚೇರಮಚರಿತ್ರಮಂ
ಪದಪಿಂದ ಬರೆದೋದಿ ಕೇಳಿ ವಿಸ್ತರಿಸುವ
ರ್ಗೊದಗಿಪ್ಪುದಾಯುರಾರೋಗ್ಯ ಸಂಪದ ಸರ್ವಸಿದ್ಧಿ ಸತ್ಯಂ ತಥ್ಯವು ॥ ೭೩ ॥

---

[1] ಎಸಕದ್ಯೆನೂಱಮೇಲೆಪ್ಪತ್ತೈದಱಿಂದ ಲೊ (ಕ)? ಎಸಕದಿಂದ್ಯೆನೂಱಯ್ಯೆವತ್ತೈದಱಿಂದ ಲೊ?(ಗ)

* ೭೧ನೆಯ ಪದ್ಯವಾದಮೇಲೆ " ಇದು ಮುಕ್ತಾಕ್ಷರ ಗ್ರಸ್ತ " ಎಂಬ ಗದ್ಯವಿದೆ.

# ಪರಿಶಿಷ್ಟ

## 'ಗ' ಪ್ರತಿ

### ಮೂರನೆಯ ಸಂಧಿ

ಆಳೋಕಿಸುತ್ತಿತ್ತಿಕೊಂಡು ಕಂದನ ಮಹೀ
ಪಾಲನೆಂಬ ತೋಳು ತೋಳಾ ಜಲಂಧರನ
ಮೇಳೆಯಂ ಕೊಱೆದ ಚಕ್ರಂಬಿಡಿದಕೃತ್ಯದಿಂ ಬಡಿಹೋರಿಯಾದ ಹರಿಯ।
ತೋಳದೇಂ ಭೂಚಕ್ರವಾಂತ ನಿನ್ನಯ ಚೆಲ್ವ
ತೋಳಿಗಾ ಶಿವನನರ್ಚಿಸಿ ಮುಕ್ತಿವನಿತೆಯಂ
ಪೋಳದಿಂದಾಲಿಂಗನಂಗೆಯ್ದು ತೋಳಿಗೆಣೆಯಲ್ಲೆಂದು ತೋಳಾಡಿಪಂ ॥ ೩೯ ॥

### ಆರನೆಯ ಸಂಧಿ

ಹೊಳೆವ ಹಿಮವಕ್ತ್ರಿಯರ ಬಿಣ್ಪತಹ ಕುಚಂ
ಗಳ ಸೋಂಕಿ ಬದುಕಲೊಲ್ಲದ ಮಹಾ ನಿಷ್ಕಾಮಿ
ಗಳ ಕೂಡಿಯೊಳಗಿಟ್ಟುಕೊಂಡಿರ್ಪ ಮನೆಗಳಂ ಮಾಳಿಗೆಗಳಂ ತಳ್ಪವ।
ನಳನಳಿಪ ಕಂಬಳಿಗಳಂ ನಾಡೆ ತೃಣಕಾಷ್ಟ
ಕುಳಕೆ ತೂಲಕ್ಕೆ ಕುಱುದುಪ್ಪಟಿಗೆ ಸರಿಗಂಡು
ಚಳಿ ಮನೋಹರವಾಗಿ ರಾಜಿಸುವುದೆನಲದಱನತಿಶಯವನೇವಣ್ಣಿಪೆಂ ॥ ೩ ॥

### ಒಂಬತ್ತನೆಯ ಸಂಧಿ

ಬಾಲ ಕೈಯರ್ಸ್ಸೋಪಿ ಸಪ್ತವರ್ಷಾಂತರೇ
ಲೀಲಯಾ ಸಾಕಟಸ್ಥೋವರ್ತತೇಪಿ ತ
ತ್ಕಾಲೇ ಮದದ್ವಿಪಶ್ಛಾಯಯಾ ದೃಷ್ಟ್ವಾತ್ವಮುನ್ನತಂ ಸೌಂದರೇಶಂ।
ಆಲೋಕನೇನ ನತ್ವಾಯಯಾ ಶ್ರುತ್ವಾನ್ಯ
ಪಾಲ ನರಸಿಂಹಮುನಿಯಾ ನಾರ್ಮಧೇಯಃ ಕೃ
ಪಾಲು ಶಿವವಿಪ್ರವರ ಜಡೆಯನಯಿನಾರೋರ್ವರಾಲಯಮಗಚ್ಛತ್ಸ್ವಕಂ ॥ ೨೨ ॥*

---

* ೨೨ನೆಯ ಪದ್ಯವಾದಮೇಲೆ "ಇದು ಸಂಸ್ಕೃತದ ವಿಭಕ್ತಿಯ ಪದಹು॥ ಇನ್ನು ಅದರರ್ಥದ ಕನ್ನಡ ಪದನು" ಎಂಬ ಗದ್ಯವಿದೆ.

## ಹನ್ನೊಂದನೆಯ ಸಂಧಿ

ಬಿಡಿಧೂಪವೆಸೆವ ಕಾರ್ಬೊಗೆಯಲ್ಲಿ ಬಜ್ಜರದ
ಕಡೆಹಂಗಳೆಸಕವೇ ಬೆಳ್ಪೊಗೆಗಳಾ ಸೇನೆ
ಯೆಡೆಯ ಧೂಳಿಯೆ ಕವಿದ ಕೆಂಬೊಗೆಗಳುಱೆ ರತ್ನಮಕುಟ ಕಿರಣಂ ಗಗನಕೆ।
ಅಡರ್ವ ಪೇರುರಿಯಾಗೆ ಲಿಂಗಪ್ರಸಾದಿ ನೆಲ
ನೊಡೆಯ ಚೇರಮರಾಯನಾ ಪ್ರತಾಪಾಗ್ನಿ ದಿವಿ
ಯಡಿಗೆ ಸೋಪಾನಮಾಗಲ್ಕೆ ಮಝುರೇ ಧಾಳಿಯಿಡುವ ಬಗೆ ಪೊಸತೆನಿಸಿತು ॥ ೪೬ ॥



# ಒಪ್ಪೋಲೆ



| ಪುಟ | ಪದ್ಯ | ತಪ್ಪು | ಒಪ್ಪು |
|---|---|---|---|
| 3 | ೧೧ | ಮಲ್ಲಣಾರ್ಯಪೌತ್ರ | ಮಲ್ಲಣಾಚಾರ್ಯಪೌತ್ರ |
| 4 | ೧೭ | ಧನಕನಕದೊದವಿನಿಂದಂ | ಧನಕನಕ[ರಥ]ದೊದವಿನಿಂದಂ |
| 5 | ೨೩ | ಶಂಕೆಯಿಂದಾ | ಶಂಕೆಯಿಂ |
| 7 | ೨೯ | ರಾಜಿಪ್ಪುದುಱಿ | ರಾಜಿಸಿರ್ಪುದುಱಿ |
| 10 | ೪೮ | ನಿನ್ನ | ನಿನ್ನಂ |
| 12 | ಸೂಚನೆ | ತನಗಣುಗನಪ್ಪ | ತನಗಣುಗನಪ್ಪಾ |
| 14 | ೧೨ | ಕಳುತಿ \| ರ್ಪಂತೆ | ಕಳು[ಪು]ತಿ \| ರ್ಪಂತೆ |
| 15 | ೧೮ | ಪಿಡದಿರ್ದ | ಪಿಡಿದಿರ್ದ |
| 17 | ೨೯ | ಕದಕದಿಪ | ಕದಕ್ಕದಿಪ |
| 26 | ೨೩ | ಪರಮುಸಮುಯತತಿ | ಪರಸಮುಯತತಿ |
| 33 | ೭ | ಮುತ್ತುವರೊಪ್ಪುಗೊಡಲು | ಮುತ್ತಲವರೊಪ್ಪುಗೊಡಲು |
| 38 | ೩೧ | ಸೇವೆಯಿರುಳೆ ಪುರುಷ ಕೇಳಿಯೆ | ಸೇವೆಯಿರುಳೇ ಪುರುಷ ಕೇಳಿಯೋ |
| 39 | ೩೯ | ಗಾಳಿಗೆಳೆಯನೊಳಚ್ಚಿಯಿಂ | ಗಾಳಿಗೆಳೆಯನೊಳ್ಪಚ್ಚಿಯಿಂ |
| 53 | ೯ | ಚಿತ್ರೈಸು | ಚಿತ್ರೈಸು |
| 54 | ೧೩ | ಅಂತುಟಪ್ಪೆಯಯ್ಯ | ಅಂತಪ್ಪೆಯಯ್ಯ |
| 56 | ೨೨ | ಸನತ್ಕುಮಾರಗೊರೆದುದಂ | ಸನತ್ಕುಮಾರಂಗೊರೆದುದಂ |
| 56 | ೨೪ | ಸುರಭಿ ಸುಶಿಲಾ | ಸುರಭೀ ಸುಶೀಲಾ |
| 59 | ೩೯ | ಸಾಷ್ಟಾಂಗದಿಂದಂ | ಸಾಷ್ಟಾಂಗದಿಂ |
| 63 | ೧ | ಝುಗಝುಗಿಸುವಚ್ಚ ಕೆಂಗದಿರ್ಗಱಿವ | ? |
| 64 | ೮ | ಗಾಡಿಕಾರ್ತಿಯರಥಗರಂಗಳ್ಗೆ | ಗಾಡಿಕಾರ್ತಿಯರರಥರಂಗಳ್ಗೆ |
| 65 | ೧೩ | ದೊಳೆಗಳಂ | ದೊಳೆಗಳ |
| 70 | ೩೯ | ಮೆಱವುತ್ತಿರ | ಮೆಱೆವುತ್ತಲಿರ |
| 73 | ೯ | ಮೂಳೆಯೆಂಬಂತೆ | ಮೊಳೆಯೆಂಬಂತೆ |
| 76 | ೨೨ | ಧರಿಸುತಾ | ಧರಿಸುತಂ ತನು |
| ,, | ,, | ಮೂಲಿಕೆಯ \| ನೆನ್ನಾಣೆ | ಮೂಲಿಕೆಯನಿದ \| ನೆನ್ನಾಣೆ |
| ,, | ೨೪ | ದೈವ \| ತತಿವಾವೃತ್ತಿಮುಖ | ದೈವ \| ತತಿವರ್ಣವಾಗ್ವೃತ್ತಿಮುಖ |
| 85 | ೧ | ವಿತತಿಯ | ವಿತತಿಯಂ |
| 89 | ೨೧ | ಜಡೆಯ ನೈನಾರುಯಸ್ಯಜಾನಿ | ಜಡೆಯ ನೈನಾರುಥುಸ್ಯಜ್ಞಾನಿ |

| ಪುಟ | ಪದ್ಯ | ತಪ್ಪು | ಒಪ್ಪು |
|---|---|---|---|
| 90 | ೨೫ | ತೊಟ್ಟಂತೆ | ತೊಟ್ಟ[ಕಂ]ತೆ |
| 92 | ೩೯ | ವಿರಹಭಾಧೆಯ | ವಿರಹಬಾಧೆಯ |
| 94 | ೪೯ | ನಂಬಿಯುಂ | ನಂಬಿಯು |
| 98 | ೧ | ಮೋಹನತ । ರಂಗಂಗೆ | ಮೋಹನತ[ರತ] । ರಂಗಂಗೆ |
| 107 | ೪೬ | ಬಂದಿರ್ವರ್ಗೆ | ಬಂದಿವರ್ಗೆ |
| 110 | ೧ | ಜೊನ್ನಗೂಳಯುವರೋಜನಾ | ಜೊನ್ನಗೂಳವರೋಜ |
| 117 | ೩೮ | ಕರಂಗಳಂ | ಕರಂಗಳ |
| 119 | ೪೬ | ಶಿವಭಕ್ತರ್ಗಲ್ಲದಿಕ್ಕೆನೆನೆ | ಶಿವಭಕ್ತರಿಂಗಲ್ಲದಿಕ್ಕೆನೆನೆ |



ಬಿ. ಎಂ. ಶ್ರೀಕಂಠಯ್ಯ ಅಚ್ಚುಕೂಟ, ಕ. ಸಾ. ಪ., ಬೆಂಗಳೂರು-೨.